# ON PILGRIMAGES.

## A DIALOGUE.

# ತಿರುಪತಿಯಾತ್ರೆ.



MANGALORE:
PRINTED BY STOLZ & REUTHER, BASEL MISSION PRESS.
1870.

# ತಿರುಪತಿಯಾತ್ರೆ.

ಲಕ್ಷ್ಮಣರಾಯರು, ಗಣಪತಿಶಾಸ್ತ್ರಿ, ಗೋವಿಂದ ಐತಾಳ, ಸುಬ್ರಾಯರು, ಇವರು ತಿರುಪತಿಯಾತ್ರೇ ವಿಷಯವಾಗಿ ಮಾಡಿದ ಸಂಭಾಷಣೆಯು.

ಒಂದು ದಿವಸ ಸಂಜೆ ಹೊತ್ತಿನಲ್ಲಿ ನಾನು ತಿರುಗಾಡುತ್ತಾ ಇರುವಾಗ್ಯೆ, ಒಂದು ಪಾಲಕಿಯು ಬಹು ಸಂಭ್ರಮದಿಂದ ಬರುವದನ್ನು ಕಂಡೆನು. ಆ ಪಾಲಕಿಯ ಹಿಂದೆ ಮುಂದೆ ಸುಮಾರು ಎರಡು ಸಾವಿರ ಜನರು ಕೂಡಿದ ಒಂದು ದೊಡ್ಡ ಸಮೂಹವು ಶಂಖಧ್ವನಿಯೊಡನೆ ತಾಳ ಮೃದಂಗ ಇತ್ಯಾದಿ ವಾದ್ಯರಬಸದಿಂದ ಬಹು ಅಟ್ಟಹಾಸ ಮಾಡಿ ಕೊಂಡು, ಅನೇಕರು ಪುಷ್ಪ ತುಲಸಿ ಮುಂತಾದರ ಮಾಲೆಗಳನ್ನು ಧರಿಸಿ ಕೊಂಡು, "ತಿರುಪತಿವೆಂಕಟರಮಣನ ಪಾದಕ್ಕೆ ಗೋವಿಂದಾನಗೋವಿಂದಾ" ಎಂದು ಘಟ್ಟಿಯಾಗಿ ಕೂಗಿ ಒದರುತ್ತಾ ಬರುವದನ್ನು ದೃಷ್ಟಿಸಿ ನಿಂತೆನು. ಆ ಜನರ ಗುಂಪಿನಲ್ಲಿ ನಾನಾ ದೇಶದವರೂ ನಾನಾ ಭಾಷೆಯವರೂ ನಾನಾ ಜಾ

ತಿಯವರೂ ಇದ್ದರು. ಅವರಲ್ಲಿ ಕುರುಡರೂ ಕುಂಟರೂ ರೋಗಿಷ್ಠರೂ ಜ್ವರದಿಂದ ನಡುಗುವವರೂ ಕಳ್ಳರಿಂದ ಸುಲುಕೊಳ್ಳಲ್ಪಟ್ಟವರೂ ವಸ್ತ್ರಹೀನರೂ ಮುದುಕರೂ ಸ್ತ್ರೀಯರೂ ಇದ್ದರು. ಇದಲ್ಲದೆ ತಾಳ, ಮದ್ದಳೆ, ತಂಬೂರಿ, ವೀಣೆ ಇತ್ಯಾದಿ ಗಾಯನಾದಿ ಕರಣಗಳನ್ನು ಬಾರಿಸಿ, ತಿರುಪತಿವೆಂಕಟರಮಣನ ಸ್ತುತಿ ಸ್ಮರಣೆ ಮಾಡುತ್ತಾ, ಹಾಡುತ್ತಾ, ಬಹು ಭಕ್ತಿ ಭಾವದಿಂದ ಆ ಪಾಲಕಿಯ ಮುಂದೆ ನಡಿಯುವ ದಾಸರು ಬಹಳ ಮಂದಿ ಇದ್ದರು. ಈ ಪ್ರಕಾರ ಅಟ್ಟಹಾಸದಿಂದ ದೊಡ್ಡ ಗುಲ್ಲು ಮಾಡಿ ಕೊಂಡು ಬರುವ ಜನರನ್ನು ಕರದು, "ಓ ಜನರೇ, ಊರಿನಿಂದ ಗಡಿಪಾರಾಗಿ ಹೊರಡಿಸಿದ ಹಾಗೆಯೇ, ಇಲ್ಲವೇ ಯಾರಾದರೂ ಲೂಟ್ಟಿ ಮಾಡಿದ ಹಾಗೆಯೇ ಒದರಿಕೊಂಡು ಯಾವ ಕಡೆಗೆ ಹೋಗುತ್ತೀರಿ?" ಎಂದು ಕೇಳಿದೆನು. ಆಗ ಒಬ್ಬ ದಾಸನು, "ಅವರನ್ನು ಪಾಪವೆಂಬ ಕಳ್ಳನು ಲೂಟಿ ಮಾಡಿದರಿಂದ, ಅವರು ಸಾಕ್ಷಾತ್ ವಿಷ್ಣುರೂಪವಾದ ವೆಂಕಟರಮಣನ ಪಾದಕ್ಕೆ ಶರಣು ಹೋಗಿದ್ಧಾರೆ; ಅವರು ವ್ಯರ್ಥವಾಗಿ ಒದರುವದಿಲ್ಲ; ಅವರು ದೇವರ ಭಜನೆ ಮಾಡುತ್ತಾರೆ; ಅವರು ವೆಂಕಟರಮಣದೇವರ ಕಾಣಿಕೆಡಬ್ಬಿಯ ಪಾಲಕಿ ಸಂಗಡ ತಿರುಪತಿಯಾತ್ರೆಗೆ ಹೋಗಿದ್ದರು," ಅಂದ

ಸು. ಆಗ್ಯೆ ಅವರ ಯಾತ್ರೆಯ ಸಂಭ್ರಮ ನೋಡಿ, ನಾನು
ಸಹ ಆ ಮಹಾ ಪುಣ್ಯಕ್ಷೇತ್ರಕ್ಕೆ ಯಾತ್ರೆ ಮಾಡ ಬೇಕೆಂದು
ಮನಸ್ಸಿನಲ್ಲಿ ಯೋಚಿಸಿ ಕೊಂಡೆನು; ಆದರೆ ಅದು ಮಳೆಗಾಲ
ವಾಗಿ ಮೋಡಗಳಿಂದಲೂ ಗುಡುಗು ಮಿಂಚುಗಳಿಂದಲೂ
ಆಕಾಶವು ತುಂಬಿತ್ತು, ಮತ್ತು ಮಳೆಯು ಏಕಮಯವಾಗಿ
ಸುರಿಯುತ್ತಿತ್ತು. ಆದ ಕಾರಣ ನನ್ನ ಮನಸ್ಸು ಯಾತ್ರೆ ಕಡೆ
ಯಿಂದ ಹಿಂಜರಿಯಿತು. ಮಳೆಗಾಲದನಂತರ ತಿರುಪತಿಯಾ
ತ್ರೆ ಮಾಡ ಬೇಕೆಂಬ ನಿರ್ಧಾರ ಮಾಡಿ ಕೊಂಡಿರುತ್ತಾ, ಈ
ಬಡ ಜನರು ಅಷ್ಟು ದೂರ ಪ್ರಯಾಣ ಮಾಡಿದರಷ್ಟೆ, ಇವ
ರ ಅವಸ್ಥೆ ಏನಾಗಿರ ಬೇಕು? ಎಂಬದು ತಿಳಿಯುವದಿಲ್ಲ; ಇ
ದರ ವಿಷಯ ತಿಳಕೊಳ್ಳ ಬೇಕು ಎಂಬ ಚಿಂತೆಯಲ್ಲಿದ್ದೆ. ಸ್ವ
ಲ್ಪ ಕಾಲದ ಬಳಿಕ ಅವರಿಗೆ ಯಾತ್ರೆಯಲ್ಲಿ ಸಂಭವಿಸಿದ ಅವ
ಸ್ಥೆಯ ವಿದ್ಯಮಾನವನ್ನು ನನಗೆ ಕೂಲಂಕುಶವಾಗಿ ತಿಳಿಯ
ಬಂತು, ಏನೆಂದರೆ: ಆ ಯಾತ್ರೆಯಲ್ಲಿ ಕೆಲವರು ಮಿಂಚು ಬಿ
ದ್ದದರಿಂದಲೂ, ಕೆಲವರು ನದಿಯ ಪ್ರವಾಹದಿಂದಲೂ, ಕೆ
ಲವರು ವಾಂತಿಭೇದಿರೋಗದಿಂದಲೂ ನಾಶವಾದರು; ಮ
ತ್ತು ಉಳಿದ ಸ್ವಲ್ಪ ಜನರು ಬಹು ಶ್ರಮ ಪಟ್ಟು ಬಂದರೆಂಬ
ವರ್ತಮಾನ ಕೇಳಿ ಬಹಳ ವ್ಯಸನ ಪಟ್ಟೆನು. ಆದಾಗ್ಯೂ ನಾ

ನು ನಿಶ್ಚಯ ಮಾಡಿ ಕೊಂಡ ಪ್ರಕಾರವೇ ತಿರುಪತಿಗೆ ಹೋಗಿ, ಅಲ್ಲಿಯ ಯಾತ್ರೆಯ ತಮಾಶೆಯೆಲ್ಲ ನೋಡಿ, ತ್ವರೆಯಾಗಿ ಹೊರಟು, ನನ್ನ ಊರಿಗೆ ಸುರಕ್ಷಿತವಾಗಿ ಶೇರಿದೆನು. ಈ ಸಮಾಚಾರವನ್ನು ಕೇಳಿದ ನನ್ನ ಸ್ನೇಹಿತರಾದ ಗಣಪತಿಶಾಸ್ತ್ರಿಯರೂ ಗೋವಿಂದ ಐತಾಳರೂ ಸುಬ್ರಾಯರೂ ನನ್ನ ಭೇಟಿಯ ಉದ್ದಿಶ್ಯ ಬಂದರು.

ಇವರು ಮಾಡಿದ ಸಂಭಾಷಣೆ.

ಸುಬ್ರಾಯರು: ಏನು ಲಕ್ಷ್ಮಣರಾಯರೇ! ತಾವು ತಿರುಪತಿಯಾತ್ರೆಗೆ ಹೋಗಿ ಕ್ಷೇಮವಾಗಿ ತಿರುಗಿ ಬಂದಿರಿ ಎಂಬ ವರ್ತಮಾನ ಕೇಳಿ ಬಹು ಸಂತೋಷ ಪಟ್ಟೆನು. ಹೋದ ವರುಷ ವಾಂತಿಭೇದಿರೋಗದಿಂದ ಅನೇಕರು ಮೃತ್ಯಾಧೀನವಾದರು. ನನ್ನ ಅಣ್ಣನ ಮಗನು, ಕಲ್ಲಿನ ಹಾಗೆ ಘಟ್ಟಿಯಾಗಿದ್ದ ಪ್ರಾಯಸ್ಥನು, ಸಹಾ ಯಾತ್ರೆಯಲ್ಲಿ ತೀರಿ ಹೋದನು. ಅಂದಿನಿಂದ ತಿರುಪತಿಗೆ ಹೋಗುವ ಮನಸ್ಸಿಲ್ಲದವನಾಗಿದ್ದೇನೆ. ಈ ಸಾರಿ ಆ ರೋಗವಿತ್ತೋ ಏನು?

ಲಕ್ಷ್ಮಣ: ನೀವು ತಿರುಪತಿಗೆ ಹೋಗದೆ ಇದ್ದದ್ದು ಬಹಳ ಒಳ್ಳೇದಾಯಿತು; ಏನೆಂದರೆ, ತಿರುಪತಿಯೆಂಬುವದು

ಯಮಪಟ್ಟಣವೆಂದು ನೆನಸಿರಿ. ಅಲ್ಲಿ ಹೋಗಿ ನಾನು ತಿರುಗಿ ಬಂದು ಇಂದು ನಿಮ್ಮೆಲ್ಲರಿಗೆ ಭೇಟ್ಟಿ ಕೊಟ್ಟದ್ದು ಇದು ದೊಡ್ಡ ಭಾಗ್ಯವೆಂದೂ ದೇವರ ಮಹಾ ಕೃಪೆಯೆಂದೂ ನೆನಸುತ್ತೇನೆ. ಇಲ್ಲದಿದ್ದರೆ ನನ್ನ ಶರೀರವು ದಾರಿಯಲ್ಲಿ ನಾಯಿ ನರಿ ತಿಂದು ಹೋಗ ಬೇಕಿತ್ತು.

ಗೋವಿಂದ: ಏನು ಲಕ್ಷ್ಮಣರಾಯರೇ! ಈ ಹೊತ್ತು ನೀವು ಸಾಕ್ಷಾತ್ ವಿಷ್ಣುರೂಪವಾದ ವೆಂಕಟರಮಣನ ಪಾದ ದರ್ಶನ ಮಾಡಿದ ಮೇಲೆ ನಿಮ್ಮ ಜನ್ಮ ಸಾರ್ಥಕ ಮಾಡಿಕೊಂಡು, ದಿವ್ಯ ರೂಪವಾಗಿದ್ಧೀರಿ; ಹೀಗಿರುವಾಗ್ಯೆ ನೀವು ಆ ದೇವರಿಗೆ ನಿಂದೆ ಮಾಡುವದು ಸಮವೋ? ತಿರುಪತಿಯೆಂಬುವದು ಕೇವಲ ವೈಕುಂಠವೆಂದು ಅರಿಯರೋ? ಅಲ್ಲಿ ಸಾಕ್ಷಾತ್ ವಿಷ್ಣುವಿನ ಸನ್ನಿಧಿಯು ನಿತ್ಯವಾಗಿರುತ್ತದೆ; ಮತ್ತು ಅಲ್ಲಿ ಸಾಯುವವರು ವಿಷ್ಣುಸನ್ನಿಧಿಯಾದ ವೈಕುಂಠಕ್ಕೆ ಶೇರುತ್ತಾರೆ. ಆದಕಾರಣ ಅನೇಕರು ಆ ಸ್ಥಳದಲ್ಲಿ ಸಾಯ ಬೇಕೆಂಬ ಪೂರ್ಣ ಮನಸೋ ಇಛ್ಟೆಯಿಂದ ಹೋಗುತ್ತಾರೆ. ಹೀಗಿರುವಾಗ್ಯೆ, ನೀವು ಅಂಥಾ ದೇವರಿಗೆ ಪರಿಹಾಸ್ಯ ಮಾಡುವದು ಆಶ್ಚರ್ಯವಾಗಿ ಕಾಣುತ್ತದೆ.

ಲಕ್ಷ್ಮ: ಶಾಬಾಸ್! ಹೌದು, ನೀವು ಹೇಳುವದು ಸಮ.

ಅಲ್ಲಿ ಸಾಯುವವರು ವಿಷ್ಣುಸನ್ನಿಧಿಗೆ ಹೋಗುತ್ತಾರೆ; ವಿಷ್ಣು ಸನ್ನಿಧಿ ಅಂದರೆ ಮೃತ್ಯುಸನ್ನಿಧಿಗೆ ಹೋಗಿ ಮೃತಿಕಾರೂಪ ವಾಗುತ್ತಾರೆ. ನಿಮ್ಮ ಮಾತು ಖರೆ; ನಾನು ಸಹಾ ವಿಷ್ಣುಸ ನ್ನಿಧಿಗೆ ಹೋಗ ತಯಾರಾಗಿದ್ದೆ; ಆದರೆ ನನ್ನ ಆಯುಷ್ಯದಾ ರವು ಬಲವಾಗಿತ್ತು; ಆದದರಿಂದ ಸರ್ವಶಕ್ತನಾದ ದೇವ ರ ಕೃಪೆಯಿಂದ ಮನೆಗೆ ಜೀವಂತನಾಗಿ ಶೇರಿ, ಇಂದು ನಿ ಮ್ಮೆಲ್ಲರ ದೃಷ್ಟಿಗೆ ಬಿದ್ದೆನು. ನನ್ನ ಆಯುಷ್ಯವನ್ನು ದೇವರು ಬಲ ಪಡಿಸದಿದ್ದರೆ, ನಾನು ಅಡವಿಯಲ್ಲಿ ನಾಯಿನರಿಗಳಿಗೆ ಆಹಾರವಾಗುತ್ತಿದ್ದೆ.

ಸುಬ್ರಾ: ಒಳ್ಳೆದು, ರಾಯರೇ, ನೀವು ಅಲ್ಲಿ ಏನು ತಮಾ ಶೆ ನೋಡಿದ್ದಿರೋ ಅದನ್ನು ದಯ ಮಾಡಿ ನನಗೆ ಹೇಳಿರಿ.

ಲಕ್ಷ್ಮ: ನಾನು ಗೋವಿಂದರಾಜಪಟ್ಣಕ್ಕೆ ಸಮೀಪವಾ ಗಿ ಇಳು ಕೊಂಡಾಗ, ಒಂದು ರಾತ್ರಿಯಲ್ಲಿ ಲಕ್ಷಾಂತರ ದೀಪಗಳನ್ನು ಆಕಾಶದಲ್ಲಿ ಕಂಡೆನು. ಆಗ್ಯೆ ಯಾತ್ರೆಯ ಜ ನರು ಏನೋ ತಮಾಶೆ ಮಾಡ ಹೊರಟಿದ್ಧಾರೆಂಬದಾಗಿ ತಿ ಳು ಕೊಂಡೆನು.

ಗೋವಿ: ಅದು ತಮಾಶೆಯಲ್ಲ, ಅವು ಆಕಾಶದೀಪಗ ಳಾಗಿರ ಬೇಕು. ಆಕಾಶದೀಪಗಳು ದೇವರಿಗೆ ಅತಿ ಪ್ರಿಯಕರ

ವಾಗಿವೆ; ಆದದರಿಂದ ಜನರು ಕಾರ್ತೀಕ ಮಾಸದಲ್ಲಿ ಅವುಗ ಳನ್ನು ಹಚ್ಚುತ್ತಾರೆ.

ಗಣ: ಅದು ಖರೆ, ಕಾರ್ತೀಕ ಮಾಸದಲ್ಲಿ ಆಕಾಶದೀಪ ಗಳನ್ನು ಹಚ್ಚಿದರೆ, ಪುಣ್ಯ ಉಂಟೆಂದು ಕಾರ್ತೀಕಮಾಹಾತ್ಮೆ ಯಲ್ಲಿ ಹೇಳಿ ಅದೆ. ಇದರ ವಿಷಯದಲ್ಲಿ ಒಂದು ಕಥೆ ಸಹಾ ಉಂಟು; ಏನಂದರೆ: ಕಾರ್ತೀಕ ಮಾಸದಲ್ಲಿ ಒಂದು ಮನೆಯ ಲ್ಲಿ ಬೆಳಕಿಗಾಗಿ ಹಚ್ಚಿದ ಉರಿಯುವ ಬತ್ತಿಯನ್ನು ಒಂದು ಇಲಿಯು ತೆಗದು ಕೊಂಡು, ಮನೆ ಮಾಡಿನಲ್ಲಿ ಶೇರಿತು. ಆ ಮನೆಯು ಸುಟ್ಟು ಭಸ್ಮವಾಗಿ, ಆ ಇಲಿಯು ಸಹ ಆ ಅಗ್ನಿ ಜ್ವಾಲೆಯಲ್ಲಿ ಗತವಾಗಿ ಹೋಯಿತು; ಆಗ್ಯೆ ಆ ಇಲಿಯು ವಿಮಾನದಲ್ಲಿ ಒಯ್ಯಲ್ಪಟ್ಟು ಮೋಕ್ಷಕ್ಕೆ ಶೇರಿತೆಂಬ ಕಥೆಯು ಲೋಕಪ್ರಸಿದ್ಧಿಯಾಗಿದೆ.

ಲಕ್ಷ್ಮ: ಶಾಬಾಸ್! ಒಳ್ಳೇ ಕಥೆ ಹೇಳಿದಿರಿ. ಇಂಥಾ ಹು ಚ್ಚು ಕಥೆಯನ್ನು ನಂಬಿದರೆ, ಈಗಿನ ಶಾಲೆ ಹುಡುಗರು ಸಹ ನೆಗಾಡುವರು. ಮೂಢ ಅಲ್ಪ ಜೀವಿಯಾದ ಇಲಿಯು ತಾ ನು ಮಾಡುವದೇನೆಂದು ತಿಳಿಯದೆ ಬಡ ಮನುಷ್ಯನ ಮನೆ ಯನ್ನು ಸುಟ್ಟು ಹಾಕಿದರೆ, ಅಂಥಾ ಅಲ್ಪ ಜೀವಿಗೆ ಮೋಕ್ಷ ಶಿಕ್ಕಿತೆಂಬ ನಿಮ್ಮ ಹೇಳಿಕೆಯು ಎಷ್ಟು ಅಜ್ಞಾನ ತೋರಿಸುತ್ತ

ದೆ, ನೋಡಿರಿ. ಇಂಥಾ ಹುಚ್ಚು ಕಥೆಯನ್ನು ನಂಬುವವರು ತಮ್ಮ ಸ್ವಾಭಾವಿಕ ಬುದ್ಧಿಯ ಧೃತಿಯನ್ನು ಅಜ್ಞಾನದ ಕುಣಿಯಲ್ಲಿ ಹೂಳಿಟ್ಟರೆ ಹೊರ್ತು, ನಂಬ ಕೂಡದು.

ಗಣ: ಏನು ಮಾತಾಡುತ್ತೀರಿ? ನೀವು ಪಾದ್ರೀ ಶಾಸ್ತ್ರ ಓದಿದ ಹಾಗೆ ಕಾಣುತ್ತದೆ. ಹಿಂದು ಮತದ ಮೇಲೆ ನಿಮಗೆ ಅವಿಶ್ವಾಸ ಹುಟ್ಟಿತು; ಇನ್ನು ನಿಮ್ಮ ಸಂಗಡ ಏನು ಮಾತಾಡಲಿ! ಪಾದ್ರೀ ಶಾಸ್ತ್ರ ಎಲ್ಲೆಲ್ಲಿ ಬರುತ್ತದೋ, ಅಲ್ಲೆಲ್ಲಿ ಹಿಂದು ಧರ್ಮವು ನಾಶವಾಗಿ ಬರುತ್ತದೆ. ಹಾಗೆಯೇ ಕಡೆಯಲ್ಲಿ ಎಲ್ಲಾ ಜಾತಿ ಹೋಗಿ, ಒಂದೇ ಜಾತಿಯೂ ಒಂದೇ ಮತವೂ ಆಗುವದೆಂಬ ಭವಿಷ್ಯವಾಕ್ಯವು ಪೂರ್ಣವಾಗಲಿಕ್ಕೆ ಕಾಲವು ಸಮೀಪವಾಯಿತು.

ಲಕ್ಷ್ಮ: ಇದು ಎಂಥಾ ಮಾತು! ನಾನು ಪಾದ್ರೀ ಸಾಹೇಬರ ಶಾಸ್ತ್ರ ಓದುವದರಿಂದ ನನಗೆ ಹಿಂದು ಮತದ ಮೇಲೆ ಅವಿಶ್ವಾಸ ಹುಟ್ಟಿತೆಂದು ಹೇಳುತ್ತೀರಿ, ಮತ್ತು ಕಡೆಗೆ ಎಲ್ಲಾ ಜಾತಿಯೂ ಮತವೂ ಒಂದೇ ಆಗುವದೆಂದೂ ಸಹಾ ಹೇಳುತ್ತೀರಿ. ಹೀಗೆ ಎರಡು ಮಾತುಗಳನ್ನಾಡಿ, ಮೊದಲಿನ ಮಾತಿನಿಂದ ಪಾದ್ರೀ ಶಾಸ್ತ್ರವನ್ನು ನಿಂದಿಸಿ, ಕಡೇ ಮಾತಿನಿಂದ ಅದು ಕಾಲಜ್ಞಾನದ ಭವಿಷ್ಯವಾಕ್ಯದ ಪ್ರಕಾರ ಬಂತೆಂದು ಒಪ್ಪಿ

ಕೊಳ್ಳುತ್ತೀರಿ. ಹಾಗಾದರೆ ಪಾದ್ರೀ ಶಾಸ್ತ್ರ ಎಂಬುವ ಯೇಸು ಕ್ರಿಸ್ತನ ವಾಕ್ಯವು ದೇವರ ಚಿತ್ತಕ್ಕನುಸಾರವಾಗಿ ಲೋಕಪ್ರಸಿದ್ಧಿಯಾಗಿ ನಡಿಯುತ್ತದೆಂಬುವದು ನೀವು ಸಹಾ ನಂಬುತ್ತೀರೆಂದು ಗ್ರಹಿಸಿ ಕೊಳ್ಳುತ್ತೇನೆ.

ಸುಬ್ರಾ: ಈಗ ಯೇಸು ಕ್ರಿಸ್ತನ ವಾಕ್ಯದ ವಿಷಯದಲ್ಲಿ ತರ್ಕವು ನಿಲ್ಲಲಿ. ಅದನ್ನು ಕುರಿತು ನಾವು ಆ ಮೇಲೆ ಸಂಭಾಷಣೆ ಮಾಡುವಾ. ಈಗ ನಿಮ್ಮ ಯಾತ್ರೆಗಳಲ್ಲಿ ನೋಡಿದ ವೃತ್ತಾಂತವನ್ನು ಹೇಳಿರಿ.

ಲಕ್ಷ್ಮ: ಆ ಮೇಲೆ ನಾನು ತಿರುಪತಿಗೆ ಹೋಗಿ ವಸ್ತಿ ಮಾಡಿದೆ; ಮತ್ತು ಮರುದಿವಸ ನೋಡುವಾಗ್ಯೆ, ನಾನಾ ತರದ ಜನರಿಂದ ಆ ಗಿರಿಯು ತುಂಬಿತ್ತು. ಇದಲ್ಲದೆ ಆ ಗಿರಿಯಲ್ಲಿ ಸುತ್ತುಮುತ್ತು ಎಲ್ಲಿ ನೋಡಿದರೂ, ಕೂತು ಕೊಳ್ಳುವ, ಹಾಡುವ, ತಿರುಗಾಡುವ, ಆಟ ಮಾಡುವ ಇತ್ಯಾದಿ ಜನರನ್ನು ನೋಡಿದೆ. ಎಲ್ಲಿ ಹೋದರೂ ಜನರ ಗೌಜಿಯಿಂದ ಕಿವಿದ್ವಾರಗಳು ಮುಚ್ಚಿ ಹೋದವು. ರಾತ್ರೆಯೆಲ್ಲಾ "ಗೋವಿಂದಾನಗೋವಿಂದೋ" ಎಂಬ ಕೂಗಿನಿಂದ ವಿಶ್ರಾಂತಿಯಿಲ್ಲದವನಾಗಿ, ಎಚ್ಚರಿಕೆಯಿಂದ ಕಾಲ ಕಳೆದನು. ಈ ಪ್ರಕಾರ ರಾತ್ರೆ ಕಳದ ಮೇಲೆ ಬೆಳಿಗ್ಯೆ ನೋಡುವಾಗ್ಯೆ, ಎಲ್ಲೆಲ್ಲಿಯೂ ಸ್ತ್ರೀ

ಪುರುಷರು ನಿರ್ಲಜ್ಜಸ್ಥರಾಗಿ ಹೆಜ್ಜೆ ಇಡಲಿಕ್ಕೆ ಸ್ಥಳವಿಲ್ಲದಷ್ಟು ಸಮೀಪ ಸಮೀಪವಾಗಿ ಶೌಚಕ್ಕೆ* ಕೂತು ಕೊಂಡಿದ್ದರು. ಆದ ಕಾರಣ ಆ ತಿಮ್ಮಪ್ಪನ ಗಿರಿಯು ದುರ್ಗಂಧದಿಂದ ತುಂಬಿತ್ತು; ಕೆರೆ ನದಿ ಇತ್ಯಾದಿಗಳ ನೀರು ಅಗದಿ ಕೆಟ್ಟು ಹೋಗಿತ್ತು. ಜನರ ಶೆಖೆಯಿಂದ ಹವೆಯೂ ಬಿಶಿಯಾಗಿಯೂ ನಾತದಿಂದ ಮಿಶ್ರಿತವಾಗಿಯೂ ಇದ್ದದರಿಂದ, ನನ್ನ ತಲೆ ತಿರುಗಿ ನನ್ನ ಪ್ರಕೃತಿಯು ಬದಲಾದ ಕಾರಣ ತ್ವರೆಯಾಗಿ ಬೇರೆ ಕಡೆಯಲ್ಲಿ ನನ್ನ ಠಿಖಾಣಿ ಮಾಡಿ ಕೊಂಡೆನು. ಆದಾಗ್ಯೂ ನಾಲ್ಕು ಯಾ ಐದು ದಿನ ಸ್ವಸ್ಥವಿಲ್ಲದೆ ಶ್ರಮ ಪಟ್ಟೆನು. ಹಾಂಗೂ ಯಾತ್ರೆಯಲ್ಲಿ ದೊಡ್ಡ ಜನಸಂಖ್ಯೆಯ ಶೆಖೆಯಿಂದಲೂ ಇಂಥಾ ಅಸಹ್ಯವಾದ ನಾತದಿಂದಲೂ ಹವೆಯು ಕೆಟ್ಟು ಹೋಗಿ, ಯಾವಾಗಲು ವಾಂತಿಭೇದಿರೋಗವು ಸಂಭವಿಸುತ್ತದೆಂದು ತಿಳು ಕೊಂಡೆನು. ಅದು ಛಳಿಕಾಲವಾಗಿತ್ತು; ಆದಕಾರಣ ಬೆಳಿಗ್ಯೆ ಬಹಳ ಹಿಮ ಬೀಳುತ್ತಿತ್ತು. ಇಂಥಾ ಸಮಯದಲ್ಲಿ ನದಿತೀರದಲ್ಲಿ ಮಲಗಿದವರ ಸ್ಥಿತಿಯು ಹ್ಯಾಗಿತ್ತೆಂದು ನೀವೇ ಗ್ರಹಿಸಿ ಕೊಳ್ಳ ಬಹುದು.

ಸುಬ್ರಾ. ಹಾಹಾ! ಅವರ ಕಷ್ಟವು ವಿಪರೀತವಾಗಿರ ಬೇ

---

*ಶೌಚಕ್ಕೆ ಅಂದರೆ ಹೊರ ಕಡೆಗೆ.

ಕು ಸರಿ. ತಮ್ಮ ಹಣವನ್ನು ಖರ್ಚು ಮಾಡಿ, ತಮ್ಮನ್ನು ಛಿನ್ನಾಭಿನ್ನ ಮಾಡಿ ಕೊಂಡು, ತಮ್ಮ ಕ್ಷೇಮ ನಷ್ಟ ಪಡಿಸಿ ಕೊಳ್ಳುತ್ತಾರೆ. ಇದು ಎಂಥಾ ಯಾತ್ರೆ!

ಲಕ್ಷ್ಮ: ಈ ಪ್ರಕಾರ ಜನರ ಅವಸ್ಥೆ ನೋಡಿ ನನಗೆ ಬಹಳ ದುಃಖ ಉಂಟಾಯಿತು; ಆದರೆ ಈ ಜನರು ತಮ್ಮ ಮನೆಯಲ್ಲಿದ್ದು ದೇವರಿಗೆ ಪ್ರಾರ್ಥನೆ ಮಾಡಿದರೆ, ಆತನು ಅವರ ಪ್ರಾರ್ಥನೆ ಕೇಳುವನು. ಯಾಕೆ ಅವರು ಇಷ್ಟು ದೂರ ಹೋಗಿ ತಮ್ಮನ್ನು ಕಷ್ಟದಲ್ಲಿ ಶೇರಿಸಿ ಕೊಂಡು ವ್ಯರ್ಥವಾಗಿ ಕೆಟ್ಟು ಹೋಗುತ್ತಾರೆಂದು ನಾನು ಬಹಳ ವ್ಯಾಕುಲ ಪಟ್ಟೆನು.

ಗಣ: ವ್ಯರ್ಥವಾಗಿ ಕೆಟ್ಟು ಹೋಗುತ್ತಾರೆಂದು ಯಾಕೆ ಹೇಳುತ್ತೀರಿ? ಅವರಿಗೆ ಸಾಕ್ಷಾತ್ ವಿಷ್ಣುವಿನ ಮತ್ತು ಸಾದುಸಂತರ ದರ್ಶನವಾದರೆ ಸಾಲದೋ? ಇದಕ್ಕಿಂತ ಹೆಚ್ಚಿನ ಪ್ರಯೋಜನವೇನು?

ಲಕ್ಷ್ಮ: ದೇವರು ಸರ್ವವ್ಯಾಪಿಯಾಗಿ ಸಮಸ್ತ ಕಡೆಯಲ್ಲಿದ್ಧಾನೆ, ಅಲ್ಲವೋ ಶಾಸ್ತ್ರಿಗಳೇ? ಹಾಗಾದರೆ ಅವರ ಮನೆಯಲ್ಲಿ ಸಹಾ ಇದ್ಧಾನೆಂಬುವದಕ್ಕೆ ಸಂಶಯವಿಲ್ಲ.

ಗಣ: ಹೌದು, ಇದಕ್ಕೆ ಒಂದು ಶ್ಲೋಕ ಉಂಟು:

"ಈಶ್ವರಃ ಸರ್ವಗೋ ನಿತ್ಯಂ ಸರ್ವದರ್ಶಿ ಸನಾತನಃ"

ಅಂದರೆ ಈಶ್ವರನು ಸಮಸ್ತ ಕಡೆಯಲ್ಲಿ ನಿರಂತರ ಇದ್ದಾನೆ, ಅವನು ಸರ್ವವನ್ನು ನೋಡುವಂಥವನಾಗಿದ್ದಾನೆ. ಆತನು ಇಲ್ಲದ ಸ್ಥಳ ಇಲ್ಲವೇ ಇಲ್ಲ.

ಸುಬ್ರಾ: ನೀವು ಹೀಗೆ ಹೇಳಿದರೆ, ನನಗೆ ತಿಳಿಯುವದಿಲ್ಲ; ಯಾಕಂದರೆ ವೆಂಕಟರಮಣನು ನನ್ನ ಮನೆಯಲ್ಲಿಲ್ಲವೆಂದು ಕಾಣುತ್ತದೆ. ಅವನಿಗೆಂತ ಕಟ್ಟಿದ ಮುಡುಪು ಮಾತ್ರ ನನ್ನ ಮನೆಯಲ್ಲಿ ಉಂಟು. ಹೋದ ವರುಷ ಅದು ನನ್ನ ಸೇವಕನೊಬ್ಬನು ಕದ್ದು ಕೊಂಡನು; ಅವನಿಗೆ ಏನು ಕೇಡು ಇಂದಿನ ವರೆಗೆ ಸಂಭವಿಸಲಿಲ್ಲ.

ಲಕ್ಷ್ಮ: ದೇವರು ನಿರಾಕಾರವಾಗಿರುವದರಿಂದ ಕಣ್ಣಿಗೆ ಕಾಣಲಾರನು; ಆದರೆ ಆತನು ಎಲ್ಲಾ ಕಡೆಯಲ್ಲಿದ್ದಾನೆಂಬದು ಸರ್ವರು ನಂಬುತ್ತಾರೆ. ಈಗ ವೆಂಕಟರಮಣನು ಎಲ್ಲಿರುತ್ತಾನೆಂಬ ವಿಷಯದಲ್ಲಿ ನಾವು ಮುಂದೆ ವಿಚಾರಿಸುವಾ, ಆ ಮೇಲೆ ನಿಮಗೆ ಖಚಿತವಾಗುವದು. ಈಗ ನನ್ನ ಯಾತ್ರೆಯ ವೃತ್ತಾಂತವನ್ನು ಕೇಳಿರಿ. — ಆ ಮೇಲೆ ಛಳಿಯ ಉಪದ್ರವು ಪರಿಹಾರವಾದ ಕೂಡಲೇ ನಾನು ಯಾತ್ರೆಯ ತಮಾಶೆ ನೋಡುತ್ತಾ ನೋಡುತ್ತಾ ಊರ ಹೆಬ್ಬಾಗಲ ಕಡೆಗೆ ಬಂದೆನು. ಅಲ್ಲಿ ನೋಡುವಾಗ್ಯೆ ನಾನಾ ತರದ ಜೀನಸು ಮಾರು

ವ ಸಂತೆಬಜಾರಗಳಿಂದ ತುಂಬಿತ್ತು. ಸಕಲ ಪದಾರ್ಥಗಳು
ಅಲ್ಲಿ ಶಿಕ್ಕಲಿಕ್ಕೆ ಸುಲಭವಾಗಿತ್ತು. ಅಲ್ಲಿ ಸೂಳೆರ ಅಂಗಡಿಬ
ಜಾರಗಳು ಸಹಾ ಇದ್ದವು. ಇಂಥಾ ದೊಡ್ಡ ಯಾತ್ರೆಯಲ್ಲಿ ಸ
ತ್ಯ ಮಾತಾಡುವವನನ್ನು ಅಪರೂಪವಾಗಿ ಕಂಡೆನು. ಅ
ಯ್ಯೋ! ಅಲ್ಲಿ ದುರ್ಬುದ್ಧಿಗೆ ವಶವಾದವರು ಯಥೇಷ್ಟ ಜ
ನರಿದ್ದರು. ಭಂಡು ಮಾತುಗಳಿಂದ ನನ್ನ ಕಿವಿಗಳು ತುಂಬಿದ
ವು. ಆ ಜನರ ಮನಸ್ಸಿನಲ್ಲಿ ವಾಸ ಮಾಡಿದ ಪಾಪವು, ಅವ
ರು ಯಾತ್ರೆಗೆ ಬಂದರೂ, ಅವರನ್ನು ಬಿಡುವದಿಲ್ಲ; ಅದು ಅ
ವರನ್ನು ಬಲವಾಗಿ ಆಳುವದರಿಂದ, ಅವರನ್ನು ನಷ್ಟ ಮಾಡದೆ
ಬಿಡದೆಂದು ತೋಚಿತು; ಯಾಕಂದರೆ ಆದಿ ಮನುಷ್ಯನ ಪಾ
ಪದಿಂದ ಮರಣವು ಲೋಕದಲ್ಲಿ ಶೇರಿತೆಂಬ ವಾಕ್ಯವು ನನ್ನ
ನೆನಪಿಗೆ ಬಂತು. ಇದು ನಾನು ಒಂದು ಪುಸ್ತಕದಲ್ಲಿ ಓದಿದ್ಧೇ
ನೆ; ಅದು ಯಾವದೆಂದರೆ: ಆದದರಿಂದ ಒಬ್ಬ ಮನುಷ್ಯನಿಂ
ದ ಪಾಪವೂ ಪಾಪದಿಂದ ಮರಣವೂ ಲೋಕದಲ್ಲಿ ಪ್ರವೇ
ಶಿಸಿ, ಈ ಪ್ರಕಾರ ಎಲ್ಲರು ಪಾಪ ಮಾಡಿದ್ದಲ್ಲಿ ಮರಣವು ಎಲ್ಲ
ರ ಮೇಲೆ ವ್ಯಾಪಿಸಿದ ಹಾಗಿರುವದು. (ರೋಮ. ೫, ೧೨.)
ಇದಲ್ಲದೆ ಇನ್ನು ಕೆಲವು ಶ್ಲೋಕಗಳು ದುಷ್ಟ ಮನುಷ್ಯರ ಶಿ
ಕ್ಷೇ ವಿಷಯದಲ್ಲಿ ಉಂಟು. ಅವು ಸಂಸ್ಕೃತದಲ್ಲಿ ಹೇಳಿದರೆ,

ನಮ್ಮ ಶಾಸ್ತ್ರಗಳು ಒಪ್ಪುವರೆಂದು ನೆನಸುತ್ತೇನೆ. ಯಾವವಂದರೆ:—

ಸ್ವಯಂ ಕೃತೇನ ದಂಡೇನ ಜ್ಞ್ನಾಯತೆ ಪರಮೇಶ್ವರಃ |
ಸ್ವಹಸ್ತ ಕೃತಕಾರ್ಯೇಣ ಧೃಯತೆ ಪಾತಕೀನರಃ ||
ಮನುಜೈರ್ಯೈಃ ಕೃತಂ ಪಾಪಂ ಯೈಶ್ಚ ವಿಸ್ಮೃತ ಈಶ್ವರಃ |
ಸರ್ವ್ವದೇಶೇಷು ಸಂಸ್ಥಾಸ್ಥೆ ಕ್ಷಿಪ್ಯಂತೆ ನರಕೆನರಃ ||
ಧಾರ್ಮ್ಮಿಕಾನ್ ಮಾನವಾನ್ ಸರ್ವಾನ್, ಪರಮೇಶಃ ಪರೀಕ್ಷತೆ |
ಋತೀಯತೆ ಸ್ವಚಿತ್ತೇನ ಪಾಪ್ಯುಪದ್ರಾವಿಣೋ ನರಾನ್ |
ಅಂಗಾರಂ ಗಂಧಕಂ ವನ್ಹಿ ಸ ವರ್ಷಿಷ್ಯತಿ ಪಾಪಿಷು |
ಪಾತ್ರೆ ಚಂಡ ಮರುದ್ರೂಪೆ ತೇಷಾಮುಂಶೋ ಭವಿಷ್ಯತಿ ||

ಇದರ ವ್ಯಾಖ್ಯಾನ ಅರ್ಥ ಕನ್ನಡದಲ್ಲಿ ಕೇಳಿರಿ; ಅದು ಕೀರ್ತನೆ ಎಂಬ ಪುಸ್ತಕದಲ್ಲಿ ಬರದದೆ, ಹ್ಯಾಗಂದರೆ:

ಯೆಹೋವನು ತಿಳಿಯಲ್ಪಟ್ಟಿದ್ದಾನೆ; ನ್ಯಾಯ ತೀರಿಸಿದ್ದಾನೆ; ದುಷ್ಟನು ತನ್ನ ಕೈಯ ಕೆಲಸದಲ್ಲಿಯೇ ಶಿಕ್ಕಿ ಬಿದ್ದಿದ್ದಾನೆ. (ಕೀರ್ತ. ೯, ೧೬.)

ಯೆಹೋವನು ನೀತಿವಂತನನ್ನು ಶೋಧಿಸುತ್ತಾನೆ; ದುಷ್ಟನನ್ನೂ ಬಲಾತ್ಕಾರಪ್ರಿಯನನ್ನೂ ಅವನ ಪ್ರಾಣವು ಹಗೆ ಮಾಡುತ್ತದೆ.

ದುಷ್ಟರ ಮೇಲೆ ಉರ್ಲುಗಳನ್ನು ಸುರಿಯುವನು; ಬೆಂಕಿಯೂ ಗಂಧಕವೂ ಉರಿಘಾಳಿಯೂ ಅವರ ಪಾತ್ರೆಯ ಭಾಗವಾಗಿವೆ. (ಕೀರ್ತ. ೧೧, ೫. ೬.)

ಗಣ: ಇವು ಒಳ್ಳೇ ವಾಕ್ಯಗಳು, ನೀವು ಎಲ್ಲಿ ಕಲಿತುಕೊಂಡಿರಿ? ನಮ್ಮ ಶಾಸ್ತ್ರದಲ್ಲಿ ನನಗೆ ಇನ್ನೂ ಇಂಥಾ ದಿವ್ಯ ವಾಕ್ಯಗಳು ಶಿಕ್ಕಲಿಲ್ಲ. ಈ ಶ್ಲೋಕಗಳು ಒಳ್ಳೇ ಜ್ಞಾನ ಬೋಧಿಸುತ್ತವೆ.

ಲಕ್ಷ್ಮ: ಹಾಗೋ, ಒಳ್ಳೇದು ಇನ್ನು ಮೇಲೆ ಆ ವಿಷಯದಲ್ಲಿ ಮಾತಾಡ ಬಹುದು; ಈಗಿರಲಿ. ಆ ಮೇಲೆ ನಾನು ಮಹಾ ದ್ವಾರದ ಬಳಿಗೆ ಹೋದೆ; ಅಲ್ಲಿ ಆ ದೇವರ ಪೂಜೆ ಮಾಡುವ ರಾಮಾನುಜರಾದ ಶಿವದ್ವೇಷಿಗಳು ಹರಿವಾಣ ಹಿಡಿದು, ಅದರಲ್ಲಿ ಗಂಧ ಪುಷ್ಪ ಇತ್ಯಾದಿ ಪ್ರಸಾದಗಳನ್ನಿಟ್ಟು ಕೊಂಡು, ನನ್ನ ಬೆನ್ನು ಹತ್ತಿ, "ಮಹಾ ಧರ್ಮಿಷ್ಠರೇ, ಈ ಪುಣ್ಯಕ್ಷೇತ್ರಕ್ಕೆ ಪುಣ್ಯ ಸಂಪಾದನೆ ಉದ್ದಿಶ್ಯ ಬಂದಿದ್ಧೀರಲ್ಲವೋ? ಈ ಶ್ರೀವೆಂಕಟೇಶನ ಪ್ರಸಾದ ತಕ್ಕೊಳ್ಳಿರಿ; ನಿಮ್ಮ ನಾಮಕರಣವೇನು? ನೀವು ಮುಂಚೆ ಇಲ್ಲಿಗೆ ಬಂದಿದ್ಧೀರೋ? ಇಲ್ಲವೆ ನಿಮ್ಮ ಹಿರಿಯರ್ಯಾರಾದರೂ ಬಂದದ್ದುಂಟೋ? ನೀವು ದೇವ ಬ್ರಾಹ್ಮಣಸಮಾರಾಧನೆ ಮಾಡುವಿರೋ? ಎಷ್ಟು ಖರ್ಚಿನ

ಸಮಾರಾಧನೆ ಆಗ ಬೇಕೆಂದು ಅಪ್ಪಣೆ ಕೊಡುತ್ತೀರೋ ಅ
ಷ್ಟು ಸಾಮಗ್ರಿ ತಯಾರ ಮಾಡ ಬಹುದು. ನಮ್ಮ ಮನೆಯ
ಲ್ಲಿ ಬಿಡಾರ ವಸ್ತಿ ಮಾಡಲಿಕ್ಕೆ ಬರ ಬೇಕು" ಎಂದು, ಈ ಪ್ರಕಾ
ರ ನನ್ನ ಹಿಂದೆ ಒದರಾಡಿ ಕೊಂಡು ಬಂದರು. ಆಗ್ಯೆ ನಾನು
ಹೇಳಿದ್ದು: "ನಾನು ಪೂರ್ಣಯನ ಛತ್ರದಲ್ಲಿ ಇಳು ಕೊಂಡಿ
ದ್ಧೇನೆ. ನನಗೆ ಲಕ್ಷುಮಣರಾಯರೆಂದು ಕರಿಯುತ್ತಾರೆ. ನಾ
ನು ಮುಂಚೆ ಎಂದಾದರೂ ಇಲ್ಲಿಗೆ ಬರಲಿಲ್ಲ; ನನ್ನ ಹಿರಿಯ
ರು ಬಂದಿದ್ಧಾರೋ ಇಲ್ಲವೋ ನನಗೆ ತಿಳಿಯದು. ನಾನು
ಮೊದಲು ವೆಂಕಟೇಶನ ದರ್ಶನ ಮಾಡಿ ಕೊಂಡು ಬರುತ್ತೇ
ನೆ; ಆ ಮೇಲೆ ದೇವಬ್ರಾಹ್ಮಣಸಮಾರಾಧನೇ ವಿಷಯವಾ
ಗಿ ಆಗಲಿ, ಅಥವಾ ಪೂಜೆಯ ವಿಷಯದಲ್ಲಿ ಆಗಲಿ ನೋ
ಡುವೆನು" ಎಂದು ಹೀಗೆ ಹೇಳಿ, ದೇವಸ್ಥಾನದ ಸಮೀಪ ಹೋ
ಗಲು, ಅಲ್ಲಿ ಇನ್ನು ಕೆಲವರು ಧಕ್ಷಿಣೆ ಬೇಡುವದಕ್ಕೂ ವ
ಸ್ತ್ರದಾನ ಬೇಡುವದಕ್ಕೂ ತೊಡಗಿದರು. ಈ ಪ್ರಕಾರ ನಾ
ನು ಹೋದಲ್ಲಿ ದಕ್ಷಿಣೆ ವಸ್ತ್ರದಾನ ಬೇಡುವವರು ನನ್ನ ಹಿಂ
ದೆ ಹತ್ತಿ ನನ್ನನ್ನು ಬೇಸರ ಪಡಿಸಿದರಿಂದ ಬಹಳ ಶ್ರಮೆ ಪ
ಟ್ಟೆನು. ಹೀಗೆ ಒಬ್ಬ ಲಕ್ಷಾಧಿಪತಿಯು ಈ ಮಾರ್ಗವಾಗಿ
ಹೋಗಿ ಬೇಡುವವರಿಗೆ ಕೊಡಲಿಕ್ಕೆ ಆರಂಭಿಸಿದರೆ, ಅವನು

ತಿರುಗಿ ಬರುವಾಗ್ಯೆ ಭಿಕ್ಷಾಧಿಪತಿಯಾಗಿ ಬರ ಬೇಕಾಗು
ವದು. ಈ ಬೇಡುವವರಿಗಿಂತ ಅಡವಿಯಲ್ಲಿ ಲೂಟಿ ಮಾಡು
ವ ಕಳ್ಳರು ವಾಶಿ ಎಂದು ನನಗೆ ತೋಚಿತು. ಆ ಬಳಿಕ ನಾ
ನು ದೇವಸ್ಥಾನದ ಒಳಗೆ ಹೋಗ ನೋಡಿದೆ; ಆದರೆ ಅಲ್ಲಿ
ಕೇವಲ ಮಾರಾಮಾರಿ ಆಗುವ ಹಾಗೆ ಕಂಡಿತು, ಹ್ಯಾಗೆಂ
ದರೆ: ಒಳಗೆ ಹೋದವರು ಹೊರಗೆ ಬರುವಾಗ್ಯೆ, ಅರ್ಧ ಜೀ
ವ ಉಳ್ಳವರಾಗಿ ಬರುತ್ತಿದ್ದರು; ದೇವಸ್ಥಾನದೊಳಗೆ ಸ್ವಾಸ
ಖಾಸ ಬಿಡುವ ಹಾಗೆ, ಘಾಳಿಗೆ ಇಂಬು ಇರಲಿಲ್ಲಾ; ಹೊರ
ಗೆ ಬಂದವರು ತಮ್ಮ ಬೆವರಿನಿಂದ ಒದ್ದೆಯಾದ ವಸ್ತ್ರಗಳನ್ನು
ಹಿಂಡ ಬೇಕಾಗಿತ್ತು. ಈ ಪ್ರಕಾರ ಜನರ ಅವಸ್ಥೆಯನ್ನು ನೋ
ಡಿ, ನಾನು ಒಳಗೆ ಪ್ರವೇಶಿಸದೆ ನಿಂತೆನು. ಅಷ್ಟರಲ್ಲಿ ಒಂದು
ದುಃಖಕರದ ಸಂಗತಿಯು ನನ್ನ ದೃಷ್ಟಿಗೆ ಬಿತ್ತು. ಅದೇನಂ
ದರೆ: ದೇವಸ್ಥಾನದೊಳಗೆ ದೇವರ ಭೇಟಿಗೆ ಹೋದವರು ಹೊ
ರಗೆ ಬರುವಾಗ್ಯೆ, ಒಬ್ಬನು, "ಐಯೋ ನನ್ನ ಕೈ ಮುರಿದು
ಹೋಯಿತಲ್ಲಾ!" ಮತ್ತೊಬ್ಬನು, "ಐಯೋ ನನ್ನ ಕಾಲು ಉ
ಳಿಕಿ ಹೋಯಿತು, ನಡಿಯಲಾರೆ!" ಇನ್ನೊಬ್ಬನು, "ನನ್ನ ಕಣ್ಣು
ಹೋಯಿತು, ನಾನು ಊರಿಗೆ ಕುರುಡನಾಗಿ ಹೋಗ ಬೇ
ಕಾಯಿತಲ್ಲ!" ಮತ್ತು ಕೆಲವರು, "ಐಯೋ, ನಾವು ಬರುವಾ

ಗ್ಯೆ ಸುಖವಾಗಿ ಬಂದೆವು, ಈಗ ತಿರುಗಿ ಹೋಗುವಾಗ್ಯೆ ಊ
ನರಾಗಿಯೂ ಸಂಕಟ ಉಳ್ಳವರಾಗಿಯೂ ಹೋಗ ಬೇಕಾ
ಯಿತು; ಆ ವೆಂಕಟರಮಣನಿಗೆ ಬೆಂಕಿ ಬೀಳಲಿ! ನಾವು ಎಂದಿ
ಗೂ ಪುನಃ ಇಲ್ಲಿಗೆ ಬರಲಾರೆವು" ಎಂಬ ಈ ಪ್ರಕಾರ ಗೋಳಾ
ಟದ ನುಡಿಗಳಿಂದ ಹೊರಗೆ ಬರುವದನ್ನು ಕಂಡೆನು. ಇದು
ಎಂಥಾ ಯಾತ್ರೆ! ಇದು ಎಂಥಾ ದೇವರು! ಇದು ಎಂಥಾ
ಭಕ್ತಿ! ಸುಮಾರು ಅರುವತ್ತು ಸಾವಿರ ಜನರು ಕೂಡಿದ್ದರು;
ಇವರಲ್ಲಿ ಭಕ್ತಿಭಾವ ಉಳ್ಳ ಜನರನ್ನು ನಾನು ಕಾಣಲೇ ಇ
ಲ್ಲ. ಈ ಜನರು, ಒಬ್ಬರ ಕಾಣಿಕೆಯ ಡಬ್ಬಿ ಮತ್ತೊಬ್ಬರು
ಕಸಕೊಳ್ಳುತ್ತಾರೆ; ಒಬ್ಬರ ಹಿಮ್ಮಣಿ ಮತ್ತೊಬ್ಬರು ಕತ್ತರಿ
ಸುತ್ತಾರೆ; ಒಬ್ಬ ಅಸ್ವಸ್ಥವಾಗಿ ದಾರಿಯಲ್ಲಿ ಬಿದ್ದರೆ, ಮತ್ತೊ
ಬ್ಬನು ಅವನ ಮರಣವನ್ನು ಇಚ್ಛೈಸಿ, ಕಾದು ಕೊಂಡಿದ್ದು,
ಅವನು ಜೀವ ಬಿಡುವ ಮೊದಲೇ ಅವನ ಹಣ ವಸ್ತ್ರ ಪಾತ್ರೆ ಇ
ತ್ಯಾದಿ ಒಡವೆಗಳನ್ನು ಕೊಂಡೊಯ್ಯುತ್ತಾನೆ. ಇಂಥಾ ದುಷ್ಟ
ರಿಗೆ ಇನ್ನೆಂಥಾ ಭಕ್ತಿ ಇರುವದು, ನೋಡಿರಿ! ಈ ಪ್ರಕಾರ ಪ್ರೀ
ತಿ ಇಲ್ಲದೇ ದುಷ್ಟ ಮನಸ್ಸಿನಿಂದಲೂ ಕ್ರೂರತ್ವದಿಂದಲೂ ಕಾ
ಮಾತುರದಿಂದಲೂ ಲೋಭತ್ವದಿಂದಲೂ ತುಂಬಿದ ಹೃದಯ
ಉಳ್ಳವರಾಗಿ ಈ ಯಾತ್ರೆಗೆ ಬರುತ್ತಾರೆಂಬುವದು ಅವರ ಗು

ಣಗಳಿಂದ ನಿಶ್ಚಯಿಸ ಬಹುದು. ಈ ಯಾತ್ರೆಯಲ್ಲಿ ಅರೆವಾಶಿ ಜನರು ವ್ಯಾಪಾರಸ್ಥರು ಅಥವಾ ಹೊಟ್ಟೆ ತುಂಬಿಸುವವರು ಇದ್ದರು; ಇವರಲ್ಲಿ ಕಳ್ಳರೂ ಭಿಕ್ಷಗಾರರೂ ಬಹಳ ಮಂದಿ ಇದ್ದರು. ಇಂಥಾ ಗುಂಪಿನವರ ದಖ್ಖಾಮುಖ್ಖಿ ಸಲವಾಗಿ ನಾನು ಅಂದು ದೇವದರ್ಶನ ಮಾಡದೆ ತಿರುಗಿ ನನ್ನ ಬಿಡಾರಕ್ಕೆ ಬಂದೆನು. ಅಷ್ಟರಲ್ಲಿ ಸೂರ್ಯ ಅಸ್ತಮಯವಾಯಿತು; ಹ್ಯಾಗೂ ರಾತ್ರೆ ಕಳದೆ, ಮತ್ತು ಬೆಳಿಗ್ಯೆ ದೇವಸ್ಥಾನದ ಬಳಿಗೆ ಹೋದೆ; ಆಗ್ಯೆ ಜನರ ಗುಂಪು ಸ್ವಲ್ಪ ಕಡಿಮೆ ಇತ್ತು, ಭಟ್ಟನು ಪೂಜೆ ಮಾಡುತ್ತಿದ್ದನು.

ಸುಬ್ರಾ: ಲಕ್ಷ್ಮಣರಾಯರೇ, ನಿಮ್ಮನ್ನೊಂದು ಕೇಳುತ್ತೇನೆ, ಸತ್ಯವಾಗಿ ಹೇಳ ಬೇಕು. ಇಲ್ಲಿ ಜನರು, ವೆಂಕಟರಮಣನ ಮೂರ್ತಿಯು ನಾನಾ ವರ್ಣವುಳ್ಳದ್ದಾಗಿ, ಬೆಳಿಗ್ಯೆ ಬಾಲಕನಂತೆಯೂ ಮಧ್ಯಾನ್ಹದಲ್ಲಿ ಯೌವನಸ್ಥನಂತೆಯೂ ಸಾಯಂಕಾಲದಲ್ಲಿ ಮುದುಕನಂತೆಯೂ ಕಾಣುತ್ತದೆಂದು ಹೇಳುತ್ತಾರೆ; ಅದು ಖರೆಯೋ ಏನು?

ಲಕ್ಷ್ಮ: ನಾನು ಅಲ್ಲಿ ಆರು ದಿವಸ ಇದ್ದೆ; ಮತ್ತು ದಿನಾಲು ಜನರು ಕಡಿಮೆ ಆದ ಸಮಯದಲ್ಲಿ ದೇವಸ್ಥಾನಕ್ಕೆ ಹೋಗುತ್ತಿದ್ದೆ; ಆದರೆ ನೀವು ಹೇಳುವ ಪ್ರಕಾರ ನಾನು ನೋಡಲೇ

ಇಲ್ಲ. ಅದು ಒಂದು ಶಿಲಾಮೂರ್ತಿಯು, ಎತ್ತರವಾಗಿ ಎ
ರಡು ಕೈಯಿಗಳನ್ನು ಸೊಂಟದ ಮೇಲಿಟ್ಟು ಕೊಂಡು ನಿಂತದೆ.
ಅದಕ್ಕೆ ಪೂಜೆ ಮಾಡುವ ರಾಮಾನುಜ ಬ್ರಾಹ್ಮಣರು ನಾನಾ
ತರದ ವಸ್ತ್ರಾಭರಣಗಳಿಂದ ಅಲಂಕಾರ ಮಾಡುವದರಿಂದ
ಬೇರೆ ಬೇರೆ ರೂಪವಾಗಿ ಕಾಣುತ್ತದೆ; ಅಂದರೆ, ಬೆಳಿಗ್ಗೆ ಅದ
ಕ್ಕೆ ಅರಸನ ಹಾಗೆ ವಸ್ತ್ರಗಳನ್ನು ಧರಿಸಿ, ಭಂಗಾರದ ಕಿರೀಟ
ಇತ್ಯಾದಿ ಆಭರಣಗಳಿಂದ ಅಲಂಕರಿಸಿದರೆ, ಅರಸನ ಹಾಗೆ ಕಾ
ಣುತ್ತದೆ; ಸ್ತ್ರೀವೇಷ ಹಾಕಿದರೆ ಸ್ತ್ರೀಯ ಹಾಗೆಯೂ, ಬಾ
ಲಕನ ವೇಷ ಹಾಕಿದರೆ ಬಾಲಕನ ಹಾಗೆಯೂ, ಮುದುಕನ
ವೇಷ ಹಾಕಿದರೆ ಮುದುಕನ ಹಾಗೆಯೂ ಕಾಣುವದುಂಟು.
ಇಷ್ಟೇ ಹೊರ್ತು ಬೇರೆ ಚಮತ್ಕಾರಗಳು ನಾನು ಕಾಣಲಿಲ್ಲ.

ಸುಬ್ರಾ: ಈ ಮೂರ್ತಿ ಹ್ಯಾಗೆ ಉತ್ಪತ್ತಿಯಾಯಿತೆಂದು
ಅದರ ಚರಿತ್ರೆಯನ್ನು ಕೇಳಿದ್ಧೀರೋ?

ಲಕ್ಷ್ಮಿ: ಹೌದು, ನಾನು ವೆಂಕಟಗಿರಿಮಹಾತ್ಮೆಯಲ್ಲಿ ಇ
ತ್ತಲಾಗೆ ಓದಿ ತಿಳು ಕೊಂಡಿದ್ಧೇನೆ. ಅದು ಹೇಳುತ್ತೇನೆ, ಕೇ
ಳಿರಿ: ಮೇರುಪರ್ವತದ ಪುತ್ರನಾದ ವೃಷಭಾದ್ರಿ ಎಂಬ ಒಂ
ದು ಪರ್ವತವಿತ್ತು. ವೈಕುಂಠದಲ್ಲಿ ಒಮ್ಮೆ ಮಹಾಶೇಷನಿಗೂ
ವಾಯುವಿಗೂ ವಾಗ್ವಾದ ಉಂಟಾಗಿ, ವಾಯುವು ತಾನು ಬ

ಲಿಷ್ಠನೂ ಶ್ರೇಷ್ಠನೂ ಎಲ್ಲಾದಕ್ಕೆ ಜೀವದ ಆಧಾರವೂ ಆಗಿ
ದ್ದೇನೆಂದು ಮಹಾಶೇಷನಿಗೆ ಹೇಳಲು, ಅದಕ್ಕವನು—ನೀನು
ನನ್ನ ಆಹಾರವಾಗಿದ್ದಿ, ನಿನ್ನನ್ನು ನಾನು ಭಕ್ಷಿಸಿ ಬಿಡುತ್ತೇನಲ್ಲ
ವೋ? ನೀನು ಬಲಿಷ್ಠನಲ್ಲ ಎಂದು ಜರದು ಮಾತಾಡಿದನು. ಆ
ಗ್ಯೆ ವಾಯು ಕೋಪದಿಂದ ಉಗ್ರವಾಗಿ—ಹಾಗಾದರೆ ಪರೀಕ್ಷೆ
ಮಾಡುವಾ, ನನ್ನ ಬಲವನ್ನು ತೋರಿಸುತ್ತೇನೆ, ಅಂದನು. ಅ
ದಕ್ಕೆ ಮಹಾಶೇಷನು ಒಪ್ಪಿ ಕೊಂಡು—ನಾನು ಈ ವೃಷಭಾ
ದ್ರಿಪರ್ವತಕ್ಕೆ ಸುತ್ತು ಹಾಕುತ್ತೇನೆ; ಮತ್ತು ನೀನು ನನ್ನನ್ನು
ಅದರಿಂದ ಬಿಡಿಸಿದರೆ, ನೀನು ಬಲಿಷ್ಠನೇ ಸರಿ ಎಂದು ಆ ಪ
ರ್ವತಕ್ಕೆ ಸುತ್ತು ಹಾಕಿದನು. ಆಗ ವಾಯುವು ತಾನು ಪ್ರ
ಚಂಡವಾಯುವೇಗದಿಂದ ಆ ಪರ್ವತವನ್ನು ಸಮೂಲವಾ
ಗಿ ಕಿತ್ತು ಮೇಲೆ ಹಾರಿಸಿ ಸಮುದ್ರದಲ್ಲಿ ಬಿಸಾಡುವಾಗ್ಯೆ, ಆ
ಮಹಾಶೇಷನೂ ಆ ವೃಷಭಾದ್ರಿ ಪರ್ವತವೂ ಭಯದಿಂದ
ಕಂಪಿಸಿ ವಿಷ್ಣುವಿಗೆ ಪ್ರಾರ್ಥನೆ ಮಾಡಲು, ವಿಷ್ಣುವು ವೈಕುಂ
ಠದಿಂದ ಹಾರಿ, ಆ ಪರ್ವತದ ಮೇಲೆ ನಿಂತನು. ಆಗ್ಯೆ ಆ ಪ
ರ್ವತವು ಭೂಮಿಯ ಮೇಲೆ ಬಿತ್ತಂತೆ. ಆಗ್ಯೆ ದೇವತೆಗಳೆಲ್ಲಾ
ಬಂದು ವಾಯುವೇ ಬಲಿಷ್ಠನೆಂದು ಸ್ತುತಿಸಿದರು. ಅಂದಿನಿಂ
ದ ಆ ಪರ್ವತಕ್ಕೆ ಶೇಷಾದ್ರಿ ಎಂಬ ಹೆಸರಾಯಿತಂತೆ.

ಹೀಗಿರುತ್ತಿರಲಿಕ್ಕೆ ಪೂರ್ವದಲ್ಲಿ ಒಬ್ಬ ಆಕಾಶರಾಯ ನೆಂಬ ಅರಸನಿದ್ದನು. ಅವನ ಆಕಳುಗಳು ಆ ಪರ್ವತದಲ್ಲಿ ಮೇಯಲಿಕ್ಕಾಗಿ ಬರುತ್ತಿದ್ದವು. ಅವುಗಳಲ್ಲಿ ಒಂದು ಆಕಳು ನಿತ್ಯವಾಗಿ ಸಂಜೆಯಲ್ಲಿ ಅಲ್ಲಿದ್ದ ಒಂದು ಹುತ್ತಿನ ಮೇಲೆ ತನ್ನ ಹಾಲನ್ನು ಸುರಿಸಿ ಕೊಂಡು ಮನೆಗೆ ಬರುವದರಿಂದ, ಅರಸನಿಗೆ ಅದರ ಹಾಲು ಶಿಕ್ಕುತ್ತಿದ್ದಿಲ್ಲ. ಆದ ಕಾರಣ ಆಕಾಶ ರಾಯನು ಕೋಪಿಸಿ ಕೊಂಡು, ದನ ಕಾಯುವವನನ್ನು ಶಿಕ್ಷಿಸಿದನು. ಆಗ್ಯೆ ಆ ಗೋಪಾಲನು ಸಾಧಿಸಿ, ಆ ಗೋವನ್ನು ಕಾಯುವ ಸಮಯದಲ್ಲಿ ಅದು ಒಂದು ಹುತ್ತಿನ ಮೇಲೆ ತನ್ನ ಹಾಲನ್ನು ಸುರಿಸುವದನ್ನು ಕಂಡನು. ಅದನ್ನು ಅರಸನಿಗೆ ತಿಳಿಸಲು, ಅವನು ಮರುದಿವಸ ತಾನೇ ಈ ಆಶ್ಚರ್ಯವಾದ ಕಾರ್ಯವನ್ನು ನೋಡ ಬೇಕೆಂದು ಆ ಪರ್ವತಕ್ಕೆ ಬಂದು ಕಾದು ಕೊಂಡು ನಿಂತು, ಗೋಪಾಲನು ಹೇಳಿದ ಪ್ರಕಾರ ಕಣ್ಣಾರೆ ಕಂಡನು. ಆ ಮೇಲೆ ಅರಸನು ಆ ಹುತ್ತನ್ನು ಅಗಿಸಿ ನೋಡಲು, ಒಂದು ಶಿಲಾಮೂರ್ತಿ ಶಿಕ್ಕಿತು. ಆಗ್ಯೆ ಅವನು ಅಲ್ಲಿ ಅದಕ್ಕೆ ದೇವಾಲಯವನ್ನು ಕಟ್ಟಿಸಿ, ಅದನ್ನು ಪ್ರತಿಷ್ಠೆ ಮಾಡಿಸಿದನು. ಹೀಗಿರುವಾಗ್ಯೆ ಆ ಮೂರ್ತಿಯು ಸೊಂಟದ ಮೇಲೆ ಕೈಗಳನ್ನಿಟ್ಟು ನಿಂತಿದ್ದರಿಂದ, ಅದಕ್ಕೆ ಸ್ಮಾರ್ಥರು

ಶಿವನೆಂತಲೂ ವೈಷ್ಣವರು ವಿಷ್ಣುವೆಂತಲೂ ವಾಚ್ಛಾಟ ಮಾಡಿ, ಬಳಿಕ ಇಕ್ಕರ್ತರು ಕೂಡಿ, ಅದರ ಎದುರಿನಲ್ಲಿ ತ್ರಿಶೂಲವನ್ನೂ ಶಂಖಚಕ್ರಗಳನ್ನೂ ಇಟ್ಟು, ಆ ಮೂರ್ತಿ ಯಾವದನ್ನು ಧರಿಸಿ ಕೊಳ್ಳುತ್ತದೋ ಎಂದು ನೋಡಿ ಆ ಮೇಲೆ ನಿಶ್ಚಯಿಸುವಾ ಎಂದು ಒಪ್ಪಿ ಕೊಂಡು, ಅದರ ಗರ್ಭಗುಡಿಯ ಬಾಗಲನ್ನು ಬೀಗದಿಂದ ಭದ್ರ ಮಾಡಿ, ಹೊರಗೆ ನಿಂತರು. ಆಗ್ಯೆ ಪರಕಾಯಪ್ರವೇಶ ಮಾಡುವ ತಂತ್ರವನ್ನರಿತ ಒಬ್ಬ ರಾಮಾನುಜನು ಸರ್ಪದ ರೂಪವನ್ನು ಧರಿಸಿ, ಸೋಮಸೂತ್ರವೆಂಬ ಅಭಿಷೇಕ ಮಾಡಿದ ನೀರು ಬರುವ ಸಣ್ಣ ಹರಿಯದ್ವಾರದಿಂದ ಒಳಗೆ ಪ್ರವೇಶಿಸಿ, ಶಂಖಚಕ್ರಗಳನ್ನು ಆ ಮೂರ್ತಿಯ ಕೈಗಳಲ್ಲಿಟ್ಟನು. ಮರುದಿವಸ ಉಭಯ ಪಕ್ಷದವರು ಬಾಗಲು ತೆರದು ನೋಡಿದಾಗ, ಮೂರ್ತಿಯು ಶಂಖಚಕ್ರಗಳನ್ನು ಧರಿಸಿ ಕೊಂಡದರಿಂದ, ವಿಷ್ಣುವಿನ ಮೂರ್ತಿ ಎಂದು ನಿಶ್ಚಯಿಸಿದರು. ಆದ ಕಾರಣ ರಾಮಾನುಜರು ಈಗಲು ಆ ಮೂರ್ತಿಯ ಪೂಜಾರಿಗಳಾಗಿರುತ್ತಾರೆ. ಈ ಕಥೆಯಿಂದ ತಿರುಪತಿ ದೇವರು ಎಂಥವನೆಂದು ನೀವೇ ನಿರ್ಣಯಿಸಿರಿ.

ಸುಬ್ರಾ: ಈಗ ತಿಳಿಯಿತು. ಆ ವೆಂಕಟರಮಣನ ಮೂರ್ತಿಯು ವಿಷ್ಣುವಿನ ಅವತಾರವೆಂದು ತೋರಿಸಲಿಕ್ಕಾಗಿ ರಾ

ಮಾನುಜರು ಇಂಥಾ ತಂತ್ರ ಉಳ್ಳ ಪುರಾಣಗಳನ್ನುಂಟು ಮಾ
ಡಿದರೆಂಬುವದಕ್ಕೆ ಸಂಶಯವಿಲ್ಲ. ಇಂಥಾ ಕಲ್ಪನೆ ಪುರಾಣದ
ಕಥೆಯು ನನಗೂ ಒಂದು ಗೊತ್ತದೆ. ಈಗ ಸುಮಾರು ೪೦ ವ
ರುಷವಾದೀತು, ನಾನು ಸ್ವಲ್ಪ ಚಿಕ್ಕವನಾಗಿದ್ದೆ. ಇದೇ ಹೊ
ನ್ನಾವರ ತಾಲೂಕಿನಲ್ಲಿ ಒಂದು ಕರ್ಕಿ ಎಂಬ ಗ್ರಾಮ ಉಂಟು.
ಅಲ್ಲಿ ಒಂದು ಶಿಲೆಯಿಂದ ಮಾಡಿದ ಗಣಪತಿಯ ಹಳೆ ಮೂ
ರ್ತಿ ಒಂದು ದಿವಸ ಒಬ್ಬ ಬ್ರಾಹ್ಮಣನಿಗೆ ಶಿಕ್ಕಿತು. ಆಗ ಅವ
ನು ಗ್ರಾಮದವರ ಸಹಾಯದಿಂದ ಅದಕ್ಕೆ ದೇವಸ್ಥಾನವನ್ನು
ಕಟ್ಟಿಸಿ, ಆ ಮೂರ್ತಿಯನ್ನು ಪ್ರತಿಷ್ಠೆ ಮಾಡಿ, ನನ್ನ ಸ್ನೇಹಿತನಾ
ದ ಒಬ್ಬನು ಪುರಾಣಿಕನಿಂದ ಅದರ ಉತ್ಪತ್ತಿಯ ಪುರಾಣವ
ನ್ನು ಮಾಡಿಸಿದನು. ಅಂದಿನಿಂದ ಆ ಗಣಪತಿಗೆ ಬಹಳ ಜನ
ರು ನಡ ಕೊಂಡು ಕೀರ್ತಿ ಪಡಿಸುತ್ತಾರೆ. ಇದೇ ಪ್ರಕಾರ ಈ
ತ್ತಲಾಗೆ ಮುಂಬಯಿಯಲ್ಲಿ ಸಹ ಒಂದು ತಾಳಿ ಮರದ ದೇ
ವರಾಯಿತು; ಹ್ಯಾಗಂದರೆ, ಅಲ್ಲಿ ಒಂದು ದೊಡ್ಡ ತಾಳಿ ಮ
ರ ಉಂಟು. ಒಂದು ದಿವಸ ರಾತ್ರೆಯಲ್ಲಿ ಒಬ್ಬ ಪೋಕರಿ ಮ
ನುಷ್ಯನು ಪರಿಹಾಸಕ್ಕಾಗಿ ಆ ತಾಳಿ ಮರದ ಬುಡದಲ್ಲಿ ಸ್ವ
ಲ್ಪ ಕುಂಕುಮ ಗಂಧ ಅಕ್ಷತೆ ಪುಷ್ಪ ಇತ್ಯಾದಿ ಪೂಜಾಸಮ
ರ್ಪಕವಾದ ವಸ್ತುಗಳನ್ನು ಹಚ್ಚಿ, ಕಾಣಿಕೆಯಾಗಿ ಒಂದು ತಾ

ರವನ್ನು ಅಲ್ಲಿಟ್ಟು ಹೋದನು. ಮರುದಿವಸ ಬೆಳಿಗ್ಯೆ ಆ ಮಾ
ರ್ಗವಾಗಿ ಹೋಗುವವರೆಲ್ಲರು ಆ ಗಂಧ ಪುಷ್ಪ ಕಾಣಿಕೆ ಇ
ತ್ಯಾದಿಗಳನ್ನು ನೋಡಿ, ಅಲ್ಲಿ ದೇವರು ಪ್ರತ್ಯಕ್ಷವಾಗಿರ ಬೇಕೆಂ
ಬ ಮೂಢ ಭಾವದಿಂದ ತದೋಪಾದಿ ಪ್ರತಿ ಮನುಷ್ಯನು ಪೂ
ಜೆ ಮಾಡಿ ಕಾಣಿಕೆ ಇಟ್ಟು ಹೋಗುವಂಥವನಾದನು. ಹೀಗೆ
ನಡಿಯುತ್ತಾ ಬರುವಾಗ್ಯೆ, ಅಲ್ಲಿ ಒಬ್ಬ ಬ್ರಾಹ್ಮಣನು ಕಾಣಿಕೇ
ಹಣವನ್ನು ಕೂಡಿಸುವದಕ್ಕೆ ಕೂತು ಕೊಳ್ಳಲು, ಬಹಳ ಹ
ಣ ಉಂಟಾಯಿತು. ಆದದರಿಂದ ಅಲ್ಲಿ ಒಂದು ದೇವಸ್ಥಾನ
ಕಟ್ಟಿ, ಅದಕ್ಕೆ "ತಾಡಕಾದೇವ್" ಎಂಬ ಹೆಸರು ಇಟ್ಟು, ಮೂ
ಢ ಜನರು ಈಗಲು ನಡಕೊಳ್ಳುತ್ತಾರೆ. (ತಾಡಕಾದೇವ್ ಅಂ
ದರೆ, ತಾಳಿ ಮರದ ದೇವರು.) ಈ ಪ್ರಕಾರ ಜನರ ಮೂಢ
ತನದಿಂದಲೂ ಯುಕ್ತಿಯಿಂದಲೂ ದೇವರುಗಳು ಹೆಚ್ಚಾಗು
ತ್ತವೆ. ನಾನು ಇದೆಲ್ಲ ಅರಿತವನಾಗಿ ಯಾವ ಯಾತ್ರೆಗಾದರೂ
ಹೋಗುವದಿಲ್ಲ. ಮತ್ತು ಅಂದಿನಿಂದ ಈ ವಿಗ್ರಹದೇವರುಗ
ಳ ಮೇಲೆ ನಾನು ಭರವಸ ಇಡುವದಿಲ್ಲ.

ಲಕ್ಷ್ಮ: ಏನು ಹೇಳುತ್ತೀರಿ? ವಿಗ್ರಹಗಳು ದೇವರಲ್ಲದಿದ್ದ
ರೂ ನಿಜ ದೇವರು ಇಲ್ಲವೆಂದು ಭಾವಿಸಿ ಕೊಳ್ಳುತ್ತೀರೋ?

ಸುಬ್ರಾ: ಹಾಗಲ್ಲ, ಸರ್ವ ತ್ರಾಣಿಯಾದ ದೇವರೊಬ್ಬನಿ

ದ್ಧಾನೆಂದು ನಂಬುತ್ತೇನೆ. ಆದರೆ ಆ ದೇವರನ್ನು ತಿಳುಕೊಂಡು ಆತನಿಗೆ ಸಮರ್ಪಕವಾಗಿ ನಡಕೊಂಡು, ಪಾಪ ಪರಿಹಾರವನ್ನು ಪಡಕೊಂಡು, ಈ ನರಜನ್ಮವನ್ನು ಸಾರ್ಥಕ ಮಾಡಿಕೊಳ್ಳುವ ಉಪಾಯವು ಯಾವದೆಂದು ಅರಿಯೆ.

ಲಕ್ಷ್ಮ: ಹಾಗನ್ನಬೇಡಿರಿ. ನಿಜ ದೇವರ ಮಾರ್ಗವನ್ನು ಹುಡುಕಿ ಶೋಧಿಸಿದರೆ ಶಿಕ್ಕುವದು.

ಸುಬ್ರಾ: ಈಗ ಅದು ಇರಲಿ, ಆ ಮೇಲೆ ನಿಜ ದೇವರ ವಿಷಯವಾಗಿ ಮಾತಾಡುವಾ. ನೀವು ಸುಬ್ರಮಣ್ಯಯಾತ್ರೆ ಮಾಡಿದ್ಧೀರೋ? ಅದು ಮಹಾ ಪುಣ್ಯಕ್ಷೇತ್ರವೆಂದು ಅನೇಕರು ಸುಬ್ರಮಣ್ಯಷಷ್ಟಿಗೆ ಹೋಗುತ್ತಾರೆ. ಮತ್ತು ಕಾವೇರಿ ಸಂಕ್ರಮಣಕ್ಕೂ ಬಹಳ ಮಂದಿ ಹೋಗುತ್ತಾರೆ. ಇವುಗಳ ವೃತ್ತಾಂತ ನಿಮಗೆ ತಿಳಿದ ಮಟ್ಟಿಗೆ ಹೇಳಿರಿ.

ಲಕ್ಷ್ಮ: ಹೌದು, ಈ ಸ್ಥಳಗಳಿಗೂ ಹೋಗಿ ಎಲ್ಲಾ ನೋಡಿ ವಿಚಾರಿಸಿದ್ಧೇನೆ. ಸುಬ್ರಮಣ್ಯಯಾತ್ರೆಯವರ ಅವಸ್ಥೆಯನ್ನು ಹೇಳಿದರೆ, ನೀವು ದುಃಖಭರಿತರಾಗುವಿರಿ. ಅಲ್ಲಿಯ ದೇವಸ್ಥಾನವು ಒಂದು ಕಾಡಿನಲ್ಲಿ ಉಂಟು. ಸ್ಥಳನಿವಾಸಿಗಳು ಬಹಳ ಕಡಿಮೆ. ಅಲ್ಲಿ ಕಾರ್ತೀಕ ಮಾಸದಲ್ಲಿ ಷಷ್ಟಿ ಸಮಯದಲ್ಲಿ ಯಾತ್ರೆ ಸಂಬಂಧ ಎಮ್ಮೆ ದನ ಎತ್ತು ಇತ್ಯಾದಿ

ಗೋಜಾತಿಯನ್ನು ಮಾರಾಟಕ್ಕಾಗಿ ತಂದು, ಬಹಳ ಜನರು ಆ ಸ್ಥಳದಲ್ಲಿ ನೆರೆಯುತ್ತಾರೆ. ಇವರಲ್ಲಿ ಕಾಲು ಪಾಲು ಜನರು ಷಷ್ಟಿಯಾತ್ರೆಯವರಾಗಿ ಹರಿಕೆ ಸಲ್ಲಿಸಲಿಕ್ಕೆ ಕಾಣಿಕೆಯನ್ನು ತಕ್ಕೊಂಡು, ಆ ಸುಬ್ರಾಯ ದೇವರ ದರ್ಶನಕ್ಕೆ ಬರುತ್ತಾರೆ. ಇವರಲ್ಲಿ ಮಡಸ್ತ್ನನ ಹಾಕುವವರ ಅವಸ್ಥೆಯನ್ನು ಏನು ಹೇಳಲಿ! ಅದೇನೆಂದರೆ: ಅಲ್ಲಿ ಕುಮಾರಪರ್ವತದಿಂದ ಹರಿದು ಬರುವ ಕುಮಾರಧಾರೆ ಎಂಬ ಒಂದು ನದಿಯು ಆ ದೇವಸ್ಥಾನಕ್ಕೆ ಒಂದು ಮೈಲು ದೂರವಾಗಿ ಉಂಟು. ಆ ನದಿಯಲ್ಲಿ ಮಡಸ್ತ್ನನದ ಹರಿಕೆಯವರಾದ ಸ್ತ್ರೀಪುರುಷರು ಸ್ನಾನ ಮಾಡಿ, ಅಲ್ಲಿಂದ ಮಡಸ್ತ್ನನ ಹಾಕುತ್ತಾ ದೇವಸ್ಥಾನಕ್ಕೆ ಬರ ಬೇಕು. ಈ ಪ್ರಕಾರ ಮಡಸ್ತ್ನನ ಹಾಕುವವರ ಬಳಿಯ ಅವರ ಸಂಬಂಧಿಕರಲ್ಲಿ ಒಬ್ಬರಿಬ್ಬರು ಒಬ್ಬ ದಾಸನನ್ನು ಕರಕೊಂಡು, ಅವರನ್ನು ಪರಾಂಬರಿಕೆ ಮಾಡುತ್ತಾ ಅವರ ಹಿಂದಗಡೆ ಬರುತ್ತಾರೆ. ಆ ದಾಸನು ಶಂಖ ಜಾಗಟೆ ತೆಗದು ಕೊಂಡು, "ಗೋವಿಂದಾನಗೋವಿಂದಾ" ಎಂದು ಒದರುತ್ತಾ ಬರುತ್ತಾನೆ. ಈ ಪ್ರಕಾರ ಮಡಸ್ತ್ನನ ಹಾಕುವವರು ರಾತ್ರೆ ಹಗಲು ದಾರಿಯಲ್ಲಿ ಬಹಳ ಶ್ರಮೆ ಪಟ್ಟು ಹೊರಳುತ್ತಾ ದೇವಸ್ಥಾನಕ್ಕೆ ಬರುತ್ತಾರೆ; ಮತ್ತು ಕಾಣಿಕೆ

ಯನ್ನು ಡಬ್ಬಿಗೆ ಹಾಕಿ, ಹರಿಕೆ ಸಲ್ಲಿಸಿ ಹೋಗುತ್ತಾರೆ. ಹೀ
ಗೆ ಮಾಡುವಾಗ್ಯೆ, ಕೆಲವರು ಬಿಸಿಲಿನ ಕಾವಿನಿಂದ ಮೂರ್ಛೆ
ಹೋಗಿ ದಾರಿಯಲ್ಲಿ ಬೀಳುತ್ತಾರೆ; ಕೆಲವರು ತಲೆಗೆ ಬವಳಿ
ಬಂದು ವಾಂತಿ ಮಾಡುತ್ತಾರೆ. ಈ ಸ್ಥಿತಿಯಲ್ಲಿ ನಾಲ್ಕು ಯಾ
ಐದು ತಾಸು ದಾರಿಯಲ್ಲಿ ಹೊರಳುತ್ತಾ ಅನ್ನ ಆಹಾರ ಇಲ್ಲ
ದೆ ಶ್ರಮೆ ಪಡುತ್ತಾರೆ. ಇಂಥಾ ದುಃಖಕರವಾದ ಆಟವನ್ನು
ನಾನು ನೋಡುತ್ತಾ ಇರುವಾಗ್ಯೆ ಅಲ್ಲಿ ಪಾದ್ರಿಸಾಹೇಬರ
ಕಡೆ ಉಪದೇಶಿಗಳೆಂಬ ಕೆಲವರು ಆಯಾಸ ಪಟ್ಟು ಅರ್ಧ
ಜೀವಿಗಳಾದ ಆ ಮಡಸ್ತನ ಹಾಕುವವರನ್ನು ನೋಡಿ, ಅವ
ರಿಗೆ, "ಎಲೇ ಮನುಷ್ಯರೇ, ವ್ಯರ್ಥವಾಗಿ ಶ್ರಮೆ ಪಡುವ ಈ
ಕ್ರಿಯೆಗಳಿಂದ ನೀವು ಪರಿಶುದ್ಧನೂ ಸರ್ವತ್ರಾಣಿಯೂ ಆ
ಗಿರುವ ದೇವರಿಗೆ ವಿರೋಧವಾಗಿ ಮಾಡಿದ ಪಾಪವು ಹೋ
ಗದು; ನೀವು ಮಾಡಿದ ಪಾಪಕ್ಕಾಗಿ ನಿಜವಾಗಿ ಪಶ್ಚಾತ್ತಾಪ
ಪಟ್ಟು, ಪಾಪವನ್ನು ಅಸಹ್ಯಿಸಿ ಬಿಟ್ಟು, ಲೋಕರಕ್ಷಕನಾದ
ಯೇಸು ಕ್ರಿಸ್ತನೆಂಬ ದೇವರ ಅಭಿಷಿಕ್ತನ ಮೇಲೆ ವಿಶ್ವಾಸವಿ
ಟ್ಟರೆ, ನಿಮ್ಮ ಸಮಸ್ತ ಪಾಪವು ಪರಿಹಾರವಾಗಿ ದೇವರ ರಾ
ಜ್ಯದಲ್ಲಿ ನಿಮಗೆ ನಿತ್ಯಾನಂದ ಪ್ರಾಪ್ತಿ ಆಗುವದು ಹೊರ್ತು,
ಮನುಷ್ಯಕಲ್ಪಿತವಾದ ಈ ಸುಬ್ರಾಯ ಇತ್ಯಾದಿ ದೇವರು

ಗಳಿಂದ ನಿಮ್ಮ ಪಾಪಗಳನ್ನು ಪರಿಹರಿಸಿ ಕೊಳ್ಳ ಕೂಡದು. ಮತ್ತು ಇಂಥಾ ಶರೀರದಂಡನೆಯಿಂದ ನಿಮ್ಮ ಪಾಪಗಳು ನಿಮ್ಮಿಂದ ಅಗಲದೆ ನಿಮ್ಮನ್ನು ನರಕಾಗ್ನಿಗೆ ಒಯ್ಯುವದು" ಎಂಬ ರಕ್ಷಣ್ಯದ ವಾಕ್ಯಗಳನ್ನು ಹೇಳಿದರು. ಈ ಪ್ರಕಾರ ಪ್ರಸಂಗ ಮಾಡುವ ಆ ಜನರ ಮಾತುಗಳನ್ನು ಕೇಳಿ, ಒಬ್ಬ ಮಡಸ್ತನ ಹಾಕುವವನು ಅವರಿಗೆ, "ಹಾಗಾದರೆ ನಾನು ಏಳಲೋ? ನನಗೆ ರಕ್ಷಣ್ಯದ ಮಾರ್ಗವನ್ನು ತೋರಿಸಿ ಕೊಡುವಿರೋ?" ಎಂದು ಎದ್ದು ಕೂತು, ಯೇಸು ಕ್ರಿಸ್ತನ ವಿಷಯದಲ್ಲಿ ವಿಚಾರಿಸಲಾರಂಭಿಸಿದನು. ಆಗ್ಯೆ ಬೇರೆ ಜನರು ಅವನ ಮೇಲೆ ಬಹಳ ಶಿಟ್ಟು ಮಾಡಿ, ಅವನಿಗೆ, "ಈಗ ನೀನು ದೇವಸ್ಥಾನದ ಸಮೀಪ ಬಂದಿದ್ಧಿ, ನಿನ್ನ ಕಷ್ಟವನ್ನೆಲ್ಲಾ ವ್ಯರ್ಥ ಮಾಡುತ್ತೀಯೋ?" ಎಂದು ಅವನನ್ನು ಬಹಳವಾಗಿ ಹೀನೈಸಿ ನಿಂದೆಯಾಗಿ ಮಾತಾಡಿದರು. ಆದಾಗ್ಯೂ ಆ ಮನುಷ್ಯನು ಬಹಳ ಆಯಾಸ ಪಟ್ಟದರಿಂದ, ಆ ಜನರ ಮಾತಿಗೆ ಕಿವಿ ಕೊಡದೆ ಇದ್ದನು. ಹಾಗೆಯೇ ನಾನು ದೇವಸ್ಥಾನದ ಹೆಬ್ಬಾಗಲ ಬಳಿಯ ಹೋದೆ. ಅಲ್ಲಿ ಕೆಲವು ಜನರು ತೇರಿನ ಸಮೀಪವಾಗಿ ಮಲಗಿದ್ದರು; ಅವರಲ್ಲಿ ಕೆಲವರು ರಕ್ತ ಕಾರುವದನ್ನೂ ಮೈಮೇಲಿರುವ ಘಾಯಗಳಿಂದ ರಕ್ತ ಸುರಿಯು

ವದನ್ನೂ ಕಂಡು ಸ್ವಲ್ಪ ಹೊತ್ತು ನಿಂತಾಗ, ಅವರು ಹೇಳಿದ್ದು: "ಐಯೋ ನನ್ನ ಮೈಯೆಲ್ಲಾ ನೋಯುತ್ತದೆ, ತಲೆಶಿಡ ತದಿಂದ ಕಣ್ಣುಗಳ ಕಿತ್ತು ಹಾಕಿದ ಹಾಗೆ ಆಗುತ್ತದೆ; ಐಯೋ ನನ್ನ ಗ್ರಹಚಾರವೆ, ಈ ಸಂಕಟ ತಾಳಲಾರೆ; ಹ್ಯಾಗೆ ಊರಿಗೆ ಶೇರಲಿ! ನಾನು ನಡಿಯಲಾರೆ; ಇಲ್ಲೆ ಸಾಯಲಿಕ್ಕೆ ಬಂದಿದ್ಧೇನೆಂದು ಕಾಣುತ್ತದೆ; ಮಳೆ ಮೋಡ ಬಿದ್ದದೆ; ಮಳೆ ಬಿದ್ದರೆ ಎಲ್ಲಿ ಹೋಗುವಾ! ಇದಲ್ಲದೆ ವಾಂತಿಭೇದಿರೋಗವು ಎತ್ತು ಮಾರುವ ಸಂತೆಯಲ್ಲಿ ಬಂದದಂತೆ; ಅನೇಕರು ತಿರುಗಿ ಊರಿಗೆ ಹೋದರಂತೆ; ನಾವು ಇಲ್ಲೇ ಸತ್ತು ನಾಯಿನರಿಗಳ ಭಕ್ಷಣೆ ಆಗುತ್ತೇವೆಂದು ಕಾಣುತ್ತದೆ. ಈ ಸಾರಿ ನಾವು ಬದುಕಿದರೆ, ಇನ್ನೆಂದಿಗೂ ಇಲ್ಲಿಗೆ ಬರಲೊಲ್ಲೆವು" ಎಂದು ಈ ಪ್ರಕಾರ ಜನರು ಗೋಳಾಡುತ್ತಿದ್ದರು. ಇಂಥಾ ಪುಣ್ಯಕ್ಷೇತ್ರಗಳಿಗೆ ಯಾತ್ರೆ ಮಾಡುವವರ ಭಕ್ತಿ ಇದೇ. "ಜನಮರುಳೋ ಜಾತ್ರೆಮರುಳೋ?" ಎಂಬ ಗಾದೆ ಉಂಟು. ಹೀಗೆ ಒಬ್ಬರನ್ನು ಕಂಡು ಒಬ್ಬರು ಮಾಡುತ್ತಾರೆ. ಇದೆಂಥಾ ಭಕ್ತಿ ನೀವೇ ಹೇಳಿರಿ. ಈ ಜಾತ್ರೇ ಸಮಯದಲ್ಲಿ ಪಾದ್ರಿಸಾಹೇಬರು ಐದು ದಿವಸ ಪ್ರಸಂಗ ಮಾಡಿದರು; ಅವರ ಬೋಧನೆ ಆತ್ಮಿಕಭಾವದ್ದಾದದರಿಂದ, ನನಗೆ ಹಿತಕರವಾಗಿತ್ತು. ಕೆಲವರು

ಆಗ್ಯಾಗ್ಯೆ ಅವರ ಸಂಗಡ ವ್ಯರ್ಥ ತರ್ಕ ಮಾಡಿದರು, ಆದರೆ ಅಪಜಯವಾದರು.

ಗಣ: ನಿಮ್ಮ ಹೇಳಿಕೆ ಪ್ರಕಾರ ಆ ಮಡಸ್ತನ ಹಾಕಿದವರು ಬಹಳ ದುಃಖ ಪಡುತ್ತಿದ್ದರೆಂದು ಕಾಣುತ್ತದೆ; ಆದರೆ ಭಕ್ತಿಯುಳ್ಳವರು ತಾವು ಮಾಡಿದ ಸತ್ಕಾರ್ಯದಲ್ಲಿ ಕಷ್ಟ ಬಂದರೂ ಎಂದಿಗೂ ದುಃಖ ಪಡರು.

ಲಕ್ಷ್ಮ: ಖರೆ, ಖರೆ! ಇದು ಭೋಳೆ ಜನರನ್ನು ಠಕಾಯಿಸುವ ಯುಕ್ತಿಯುಳ್ಳ ಮಾತು. ಇಂಥಾ ಬೋಧನೆ ಹೇಳುವವರು ಸುಬ್ರಮಣ್ಯಾಕ್ಕೆ ವರುಷಂಪ್ರತಿ ಬರುವದರಿಂದ ಹೊಟ್ಟೆ ತುಂಬಿಸುವದಕ್ಕೆ ಒಳ್ಳೇ ಮಾರ್ಗವಾಗುತ್ತದೆ. ಹೊಟ್ಟೆ ತುಂಬಿದರೆ, ಇನ್ನು ಕೆಲಸ ಮಾಡುವದು ಅಗತ್ಯವಿಲ್ಲ.

ಸುಬ್ರಾ: ಈಗ ಅದೆಲ್ಲಾ ಇರಲಿ. ನಿಮಗೆ ವಿಠೋಬನ ವಿಷಯವಾಗಿ ಏನಾದರೂ ಗೊತ್ತುಂಟೋ? ಅವನು ಸ್ವಯಂಭೂ ಆಗಿರುವದರಿಂದ ಸಾಕ್ಷಾತ್ ಈಶ್ವರನಾಗಿದ್ದು ಭಕ್ತನಾದ ಪುಂಡಲೀಕನ ಭಕ್ತಿಗೆ ಮೆಚ್ಚಿ ಅವತರಿಸಿ ಬಂದಿದ್ಧಾನೆಂದು ಹೇಳುತ್ತಾರೆ; ಅದು ಹೌದೋ ಅಲ್ಲವೋ?

ಲಕ್ಷ್ಮ: ಗೋವಿಂದ ಐತಾಳರೇ, ನೀವು ಮೊದಲು ನಿಮ

ಗೆ ತಿಳಿದ ಪ್ರಕಾರ ಹೇಳಿರಿ; ಆ ಮೇಲೆ ನನಗೆ ತಿಳಿದದ್ದು ಹೇಳುವೆನು.

ಗೋವಿ: ವಿಠೋಬನ ಮೂರ್ತಿಯು ಹುತ್ತದಿಂದ ಉತ್ಪತ್ತಿಯಾಗಿ ಬಂದದರಿಂದ, ಅದು ಸ್ವಯಂಭೂ ಅನ್ನ ಬಹುದು, ಯಾಕಂದರೆ ಭೂಮುಖ ಒಡದು ಹುತ್ತಾಗಿ ಬೆಳದು ಬಂದ ಮೂರ್ತಿಯು ಮನುಷ್ಯನಿರ್ಮಾಣವಾಗಿರ ಕೂಡದೆಂಬುವದಕ್ಕೆ ದೃಷ್ಟಾಂತವಾಗುತ್ತದೆ; ಆದ ಕಾರಣ ಅದು ಈಶ್ವರನ ಮೂರ್ತಿಯೇ ಸರಿ. ಅದು ಪ್ರಖ್ಯಾತಿಗೆ ಬಂದು ೨೮ ಯುಗಗಳಾದವು.

ಲಕ್ಷ್ಮ: ಶಾಬಾಸ್! ಮೂಢರನ್ನು ವಂಚಿಸುವದಕ್ಕೆ ಒಳ್ಳೇ ಯುಕ್ತಿ ಉಂಟು ಮಾಡಿದ್ದಾರೆ. ಅದು ಕಲ್ಲಿನ ಮೂರ್ತಿ ಎಂದು ಸ್ಪಷ್ಟವಾಗಿ ಕಾಣುತ್ತದೆ; ಮತ್ತು ಲೋಕಚರಿತ್ರೆ ಓದಿದ್ದರೆ, ಅದು ಯಾವಾಗ್ಯೆ ಉಂಟಾಯಿತೆಂದು ಸಂಶಯವಿಲ್ಲದೆ ನಿರ್ಣಯಿಸ ಬಹುದಿತ್ತು.

ಗಣ: (ಬಹು ಶಿಟ್ಟಿನಿಂದ) ಹಾಗಾದರೆ, ನೀವೇ ಹೇಳಿರಿ; ಅದು ಯಾವಾಗ ಉಂಟಾಯಿತು ನೋಡುವಾ.

ಲಕ್ಷ್ಮ: ಜೈನರೆಂಬ ಬೌದ್ಧ ಮತಸ್ಥರು ಸ್ಥಾಪಿಸಿದ ಮೂರ್ತಿ ಎಂಬುವದಕ್ಕೆ ಅನುಮಾನವಿಲ್ಲ; ಯಾಕಂದರೆ ಅದು ನಿರ್ವಾ

ಣವಾಗಿ ನಿಂತದೆ, ಮತ್ತು ಎರಡು ಕೈಗಳನ್ನು ನಡುವಿನಲ್ಲಿ ಇ
ಟ್ಟದೆ. ಸುಮಾರು ಈಗ ಸಾವಿರದ ಇನ್ನೂರು ವರುಷಗಳ
ಹಿಂದೆ ಜೈನರಿಗೆ ಹಿಂದುಸ್ಥಾನದಲ್ಲಿ ಬಹು ಪ್ರಬಲವಾದ ಅಧಿ
ಕಾರವಿತ್ತು. ಆ ಕಾಲದಲ್ಲಿ ಅವರು ಎಲ್ಲೆಲ್ಲಿಯೂ ದೇವಸ್ಥಾನ
ಗಳನ್ನೂ ಬಸ್ತಿಗಳನ್ನೂ ಕಟ್ಟಿ, ಇಂಥಾ ನಗ್ನವಾದ ಮೂರ್ತಿ
ಗಳನ್ನು ಪ್ರತಿಷ್ಠೆ ಮಾಡಿದ್ದರು. ಅವರು ಸ್ಥಾಪಿಸಿದ ಮೂ
ರ್ತಿಗಳೆಲ್ಲಾ ಬತ್ತಲೆಯಾಗಿ, ಸೊಂಟದ ಮೇಲೆ ಕೈಗಳನ್ನಿಟ್ಟು
ಕೊಂಡು ನಿಂತಿರುತ್ತವೆ. ಇಂಥಾ ನಿರ್ವಾಣವಾದ ಮೂ
ರ್ತಿಗಳನ್ನು ನೀವು ಕಾರ್ಕಳ, ಮೂಡುಬಿದ್ರೆ, ವೇಣೂರು ಇ
ತ್ಯಾದಿ ಸ್ಥಳಗಳಲ್ಲಿ ನೋಡ ಬಹುದು. ಆ ಬೌದ್ಧ ಜನರು ವ
ರುಷಕ್ಕೆ ಒಂದೆರಡಾವರ್ತಿ ಇಂಥಾ ದೊಡ್ಡ ಸ್ಥಳದಲ್ಲಿ ಸರ್ವ
ರು ಏಕತ್ರವಾಗಿ ಕೂಡಿ ಭಜನೆ ಮಾಡುವ ಪದ್ಧತಿ ಇತ್ತು.
ಹೀಗಿದ್ದದರಿಂದ ಅಂದಿನಾರಭ್ಯ ಈ ಯಾತ್ರೆ ಮಾಡುವ ಸಾಂ
ಪ್ರದಾಯವಾಯಿತು. ಇದಲ್ಲದೆ ವಿಠೋಬನ ಮೂರ್ತಿಯು
ಜೈನರಿಂದ ಸ್ಥಾಪಿಸಲ್ಪಟ್ಟಿತೆಂದು ಅನೇಕ ವಿದ್ವಾಂಸರು ದೃಢ
ವಾಗಿ ತಿಳು ಕೊಂಡಿದ್ದಾರೆ. ಇಂಥಾ ಕಲ್ಲಿನ ಮೂರ್ತಿಯ
ನ್ನು ಸ್ವಯಂಭೂ ಆಗಿರುವ ಈಶ್ವರನದೆಂದು ಹೇಳುವ ಮಾತು
ಅಗದಿ ಬುದ್ಧಿ ಇಲ್ಲದ್ದಾಗಿದೆ.

ಸುಬ್ರಾ: ಒಳ್ಳೇದು, ಹಾಗಾದರೆ ವಿಠೋಬನ ದರ್ಶನಕ್ಕೆ ಜೈನರು ಮಾತ್ರ ಹೋಗ ತಕ್ಕದಾಗಿತ್ತು; ಆದರೆ ಹಾಗಲ್ಲವಲ್ಲ. ಅವರು ವಿಠೋಬನ ಕಡೆಗೆ ಹಣಿಕಿ ನೋಡುವದಿಲ್ಲ. ಅಲ್ಲಿ ಯಾತ್ರೆಗೆ ಹೋಗುವವರೆಲ್ಲರು ಸ್ಮಾರ್ಥರಾಗಿರುತ್ತಾರೆ. ಇದರ ಕಾರಣವೇನು?

ಗಣ: ಸುಬ್ರಾಯರೇ, ನೀವು ಅವರನ್ನಂಟ್ಟಿ ಕೊಳ್ಳ ಬೇಡಿರಿ. ಅವರು ಸಾಫ್ ನಾಸ್ತಿಕರಾಗಿದ್ಧಾರೆ. ಅವರ ಮಾತು ಕೇಳಿದರೆ, ನಿಮ್ಮ ಬುದ್ಧಿಯು ಭ್ರಂಶವಾಗಿ ಹೋದೀತು.

ಲಕ್ಷು: ಶಾಬಾಸ್! ಚಂದಾಗಿ ನ್ಯಾಯ ತೀರಿಸಿದ್ಧೀರಿ. ಶಿಟ್ಟು ಮಾಡ ಬಾರದು. ನಾನು ನಾಸ್ತಿಕನಲ್ಲ, ಸತ್ಯ ಮತವನ್ನು ಶೋಧಿಸುವವನಾಗಿದ್ಧೇನೆ. ಸುಬ್ರಾಯರೇ, ನಾನು ಹೇಳುವದನ್ನು ಚನ್ನಾಗಿ ಗ್ರಹಿಸಿದರೆ, ನಾನು ನಾಸ್ತಿಕನೋ? ಸತ್ಯ ಮತವಿಚಾರಕನೋ? ಎಂಬುವದು ಸ್ಪಷ್ಟವಾಗಿ ತಿಳಿಯುವದು. ಕೇಳಿರಿ! ಈಗ ಸುಮಾರು ಸಾವಿರದ ಇನ್ನೂರು ವರುಷಗಳಾದವು; ಈ ಭರತಖಂಡದಲ್ಲಿ ಬೌದ್ಧಧರ್ಮವು ನಡಿಯುತ್ತಿತ್ತು. ಆಗ್ಯೆ ಬಹಳ ಜನರು ಆ ಧರ್ಮಾನುಸಾರವಾಗಿ ನಡಿಯುತ್ತಿದ್ದರು. ಆದ ಕಾರಣ ಈ ಸ್ಥಳಕ್ಕೆ ಸಹಾ ಯಾತ್ರೆ ಮಾಡಿ ಕೊಂಡು ಬರುತ್ತಿದ್ದರು. ಆದರೆ ಶಂಕರಾಚಾರ್ಯ

ರು ಬೌದ್ಧಮತವನ್ನು ಖಂಡಣೆ ಮಾಡಿ ಹಿಂದು ಮತವನ್ನು ಸ್ಥಾಪಿಸಿದಾಗ, ಹಿಂದು ಜನರು ಈ ಸ್ಥಳವನ್ನು ಬೆಳಿಸಿದರಿಂದ, ಜೈನರು ಈಗ ಆ ಕಡೆಗೆ ಬರುವದಿಲ್ಲ. ಈಗ ಹಿಂದು ಜನರಿಗೆ ಎಷ್ಟು ದೇವರುಗಳಿದ್ದರೂ ಸಾಲದು; ಆದ ಕಾರಣ ಮುಸಲ್ಮಾನರ ಪೇರರಿಗೆ ಸಹಾ ಆರಾಧನೆ ಮಾಡುತ್ತಾರೆ. ಹೀಗಿರುವದರಿಂದ ಅವರು ವಿಠೋಬನ ಯಾತ್ರೆ ಮಾಡುವದು ಆಶ್ಚರ್ಯವಲ್ಲ. ಒಳ್ಳೇದು ಗಣಪತಿಶಾಸ್ತ್ರಿಗಳೇ, ದಿಗಂಬರ ಮೂರ್ತಿಯು ಅಪೂಜ್ಯವೆಂದು ಶಾಸ್ತ್ರದಲ್ಲಿ ಹೇಳಿ ಅದೆ ಅಲ್ಲವೋ? ಹಾಗಾದರೆ ಈ ಜನರು ಶಾಸ್ತ್ರಾಜ್ಞೆಯನ್ನು ಮಿೀರಿ ನಡ ಕೊಳ್ಳುವದು ಹ್ಯಾಗೆ?

ಗಣ: ಅದಕ್ಕೆ ಬಹಳ ಕಾರಣಗಳುಂಟು. ಶಾಸ್ತ್ರದಲ್ಲಿ ದಶಾವತಾರಗಳ ವಿಷಯವಾಗಿ ವರ್ಣಿಸಿ ಅದೆ, ಮತ್ತು ಬುದ್ಧಾವತಾರವು ದಶಾವತಾರಗಳಲ್ಲಿ ಒಂದು; ಆದ ಕಾರಣ ಬೌದ್ಧ ಅವತಾರವನ್ನು ಪೂಜಿಸುತ್ತಾರೆ. ಅವರು ಪೂರ್ವದಲ್ಲಿ ಬೌದ್ಧಮತಾನುಸಾರವಾಗಿ ನಡಿಯುತ್ತಿರುವಾಗ್ಯೆ, ವಿಠೋಬನನ್ನು ಭಜಿಸಿದರು. ಈಗವರು ಬೌದ್ಧಮತವನ್ನು ಪರಿತ್ಯಾಗ ಮಾಡಿದರೂ, ಬೌದ್ಧದೇವರನ್ನು ಪೂಜಿಸುವ ಅಭ್ಯಾಸ ಈಗಲು ಬಿಡಲಿಲ್ಲ.

ಲಕ್ಷ್ಮ: ಹಾಗಾದರೆ ವಿಠೋಬನು ಈಶ್ವರನೆಂಬುವದಕ್ಕೆ ಯಾವ ಪ್ರಮಾಣ ಉಂಟು? ಪುರಾಣದಿಂದ ದೃಷ್ಟಾಂತ ಕೊಡ ಬಹುದಂದರೆ ಆತನ ವಿಷಯದಲ್ಲಿ ಪುರಾಣವೇ ಇಲ್ಲ. ಮಹಾರಾಷ್ಟ್ರ ದೇಶದಲ್ಲಿ ಕೀರ್ತಿ ಪಟ್ಟ ಜ್ಞಾನದೇವ ಇತ್ಯಾದಿ ಕವೀಶ್ವರರು ವಿಠೋಬನನ್ನು ವರ್ಣಿಸುವದಿಲ್ಲ. ಆದರೆ ಇನ್ನೂರು ವರುಷಗಳ ಈಚೆ ಕಡೆಯಲ್ಲಿದ್ದ ನಾಮದೇವ, ತುಕಾರಾಮ ಎಂಬವರು ಅವನನ್ನು ಹೆಚ್ಚಾಗಿ ಹೊಗಳುತ್ತಾರೆ. ಇವರಿಗೆ ವಿಠೋಬನ ವಿಷಯವಾಗಿ ಹ್ಯಾಗೆ ತಿಳಿಯುವದು? ಗುಜರಾತ ಅತ್ತಕಡೆ ಜನರಿಗೆ ವಿಠೋಬನ ಹೆಸರೇ ಗೊತ್ತಿಲ್ಲಾ. ಅವನು ಈ ಮಾರಾಷ್ಟ್ರ ದೇಶದಲ್ಲಿ ಮಾತ್ರ ಪ್ರಖ್ಯಾತಿ ಹೊಂದಿದ್ಧಾನೆಂದು ತಿಳಿದು ಬರುತ್ತದೆ. ಕೆಲವು ವಿದ್ವಾಂಸರು ಶೋಧನೆ ಮಾಡಿ ವಿಠೋಬನು ಹೊಸ ದೇವರೆಂದು ತಿಳು ಕೊಳ್ಳುತ್ತಾರೆ.

ಗೋವಿ: ಆದರೆ ನನಗೆ ತಿಳದ ಮಟ್ಟಿಗೆ ಹೇಳುತ್ತೇನೆ. ವಿಠೋಬನು ವಿಷ್ಣು ಅವತಾರವಾಗಿರುತ್ತಾನೆ. ಅವನು ಪುಂಡಲೀಕನೆಂಬ ಒಬ್ಬ ಭಕ್ತನ ಸಲವಾಗಿ ಪಂಡರಪುರಕ್ಕೆ ಬಂದದ್ದಾಗಿರುತ್ತದೆ.

ಲಕ್ಷ್ಮ: ಒಳ್ಳೇದು, ಪುಂಡಲೀಕನ್ಯಾರು?

ಗೋವಿ: ಅವನು ಒಬ್ಬ ದುಷ್ಟ ಬ್ರಾಹ್ಮಣನಾಗಿದ್ದದರಿಂದ, ತನ್ನ ತಂದೆತಾಯಿಗಳನ್ನು ತಿರಸ್ಕರಿಸಿ, ಅವರಿಗೆ ಅವಿಧೇಯನಾಗಿ, ಅವರನ್ನು ವೃದ್ಧಾಪ್ಯದಲ್ಲಿ ಆಧರಿಸದೆ, ತನ್ನ ಹೆಂಡತಿಯನ್ನು ಕರಕೊಂಡು ಬೇರೆಯಾಗಿ, ಜೀವನ ಮಾಡುತ್ತಾ ಇದ್ದನು. ಹೀಗಿರುತ್ತಿರುವಾಗ್ಯೆ ಒಂದಾನೊಂದು ದಿವಸ ಅವನು ತನ್ನ ಹೆಂಡತಿಯ ಸಂಗಡ ಕಾಶಿಯಾತ್ರೆಗೆ ಹೋಗುವ ಸಮಯದಲ್ಲಿ ಒಂದೂರಿಗೆ ಬಂದು, ಒಬ್ಬ ಸುಶೀಲ ಬ್ರಾಹ್ಮಣನ ಮನೆಯಲ್ಲಿ ಇಳುಕೊಂಡನು. ಅಲ್ಲಿ ಆ ಬ್ರಾಹ್ಮಣನು ರಾತ್ರೆ ಹಗಲು ತನ್ನ ತಂದೆತಾಯಿಗಳ ಸೇವೆಯಲ್ಲಿ ಮಗ್ನನಾಗಿದ್ದದನ್ನು ಕಂಡನು. ಹೀಗೆ ಪುಂಡಲೀಕನು ಬೆಳಿಗ್ಯೆ ಎದ್ದು ನೋಡುತ್ತಿರಲು, ಬಹು ಸೌಂದರ್ಯವಾಗಿ ಕಾಂಚನದಂತೆ ಹೊಳಿಯುವ ಮೂರು ಸ್ತ್ರೀಯರು ಬಹು ಬೆಲೆಯುಳ್ಳ ವಜ್ರಾದಿ ನವರತ್ನಗಳಿಂದ ರಚಿಸಿದ ಆಭರಣಗಳನ್ನು ಧರಿಸಿ ಕೊಂಡು, ಆ ಸುಶೀಲ ಬ್ರಾಹ್ಮಣನ ಮನೆಯಲ್ಲಿ ನೀರು ಹೊರುತ್ತಿದ್ದರು. ಪುಂಡಲೀಕನು ಅವರನ್ನು ಕಂಡು ಅತಿ ವಿಸ್ಮಿತನಾಗಿ, ಓಡುತ್ತಾ ಹೋಗಿ, ಅವರ ಪಾದಗಳ ಮೇಲೆ ಬಿದ್ದು, ಅವರಿಗೆ, "ಅಮ್ಮನವರುಗಳಿರಾ, ನೀವು ಲಕ್ಷ್ಮಿಯಂತೆ ಚಲುವೆಯೂ ವರ್ಚಸ್ಸೂ ಐಶ್ವರ್ಯವೂ ಉಳ್ಳವರಾಗಿದ್ದು, ಇಷ್ಟು ಮುಂಜಾನೆ ಎದ್ದು

ಈ ಛಳಿಯ ಸಮಯದಲ್ಲಿ ಈ ಬ್ರಾಹ್ಮಣನ ಮನೆಗೆ ನೀರು
ಹೊರುವದು ಯಾಕೆ?" ಅಂದನು. ಅದಕ್ಕವರು, "ನಿನಗ್ಯಾಕೆ
ಈ ಪಾರುಪತ್ಯ? ನಿನ್ನ ಮಾರ್ಗ ಹಿಡಿದು ಹೋಗು!" ಅನ್ನ
ಲು, ಪುಂಡಲೀಕನು ಅವರನ್ನು ಬಹಳ ಬೇಡಿ ಕೊಂಡದರಿಂದ,
ಅವರು ಅಂದದ್ದು, "ನಾವು ಗಂಗಾ, ಯಮುನಾ, ಸರಸ್ವತಿ ಆ
ಗಿರುತ್ತೇವೆ. ನಮ್ಮಲ್ಲಿ ಹಗಲೆಲ್ಲ ಸ್ನಾನ ಮಾಡಿದ ಪಾಪಿಷ್ಟರ
ಪಾಪವು ಈ ಬ್ರಾಹ್ಮಣನ ಮನೆಯಲ್ಲಿ ನೀರು ಹೊರುವದರಿಂ
ದ ಪರಿಹಾರ ಮಾಡಿ ಕೊಳ್ಳುವದಕ್ಕೆ ತಕ್ಕವರಾಗುತ್ತೇವೆ"
ಅನ್ನಲು, ಪುಂಡಲೀಕನು "ಒಳ್ಳೇದು, ಇಂಥಾ ಪಾಪ ಪರಿಹಾರ
ವನ್ನು ಕೊಡುವ ಹಾಗೆ ಅವನಿಗೆ ಸಾಮರ್ಥ್ಯ ಹ್ಯಾಗೆ ದೊರಕಿ
ತು?" ಎಂದು ಕೇಳಿದ್ದಕ್ಕೆ, ಅವರು ಅವನಿಗೆ, "ಆ ಬ್ರಾಹ್ಮಣನು
ತನ್ನ ತಾಯಿತಂದೆಗಳನ್ನು ಅತಿ ಭಕ್ತಿಭಾವದಿಂದ ಸೇವೆ ಮಾಡಿ
ಸೌಖ್ಯ ಪಡಿಸುವದರಿಂದ ಇಂಥಾ ಸಾಮರ್ಥ್ಯ ಅವನಿಗುಂಟಾ
ಯಿತು" ಎಂದು ಹೇಳಲು, ಪುಂಡಲೀಕನು ಅದನ್ನು ಕೇಳಿದೊ
ಡನೆ ಬಹಳವಾಗಿ ಪಶ್ಚಾತ್ತಾಪ ಪಟ್ಟು, ಅಂದದ್ದು "ನಾನು ದೊ
ಡ್ಡ ಪಾಪಿಯಾಗಿದ್ಧೇನೆ, ನಾನು ನನ್ನ ಮಾತಾಪಿತರನ್ನು ಅಲಕ್ಷಿ
ಸಿ, ವೃದ್ಧಾಪ್ಯದಲ್ಲಿ ಅವರನ್ನು ಪರಿತ್ಯಾಗ ಮಾಡಿ, ಮಹಾ ಯಾ
ತ್ರೆಗೆ ಹೋಗುತ್ತೇನೆ; ಮರಣದ ತರುವಾಯ ನನಗೆ ಯಾವ ಗತಿ

ಯಾಗುವದೋ ಯಾರು ಬಲ್ಲ! ಈಗ ನನ್ನ ಮೇಲೆ ಕನಿಕರವಿ
ಟ್ಟು, ನಾನು ಯಾವ ಉಪಾಯದಿಂದ ನನ್ನ ಪಾಪವನ್ನು ಪರಿಹ
ರಿಸಿ ಕೊಳ್ಳ ಬಹುದು? ಎಂಬದಾಗಿ ನನಗೆ ದಯ ಮಾಡಿ ಹೇಳಿ
ರಿ," ಅಂದನು. ಆಗಲವರು ಅವನಿಗೆ, "ನೀನು ನಿಜ ಪಶ್ಚಾತ್ತಾಪ
ಪಟ್ಟರೆ, ಈಗ ಹೋಗಿ ಈ ಸುಶೀಲ ಬ್ರಾಹ್ಮಣನಂತೆ ಮಾತಾಪಿ
ತರನ್ನು ಏಕೋಭಕ್ತಿಯಿಂದ ಸೇವೆ ಮಾಡು; ಆಗ ನಿನ್ನ ಸ
ಮಸ್ತ ಪಾಪವು ಭಸ್ಮವಾಗಿ, ನೀನು ಉತ್ತಮ ಲೋಕಕ್ಕೆ ಹೋ
ಗುವಿ" ಎಂದು ಹೇಳಿ, ಆ ಸ್ತ್ರೀಯರು ಅಗಮ್ಯವಾದರು. ಅದೇ
ಪ್ರಕಾರ ಪುಂಡಲೀಕನು ತನ್ನ ತಂದೆತಾಯಿಗಳ ಸೇವೆಯಲ್ಲಿ ನಿ
ತ್ಯವಾಗಿ ಬಹು ಭಕ್ತಿಯಿಂದ ನಡ ಕೊಳ್ಳುತ್ತಾ ಇರುವಾಗ,
ಒಂದು ದಿನ ವಿಷ್ಣುವು ಆತನ ಭಕ್ತಿಯನ್ನು ಪರೀಕ್ಷೆ ಮಾಡ
ಬಂದನು. ಆ ಸಮಯದಲ್ಲಿ ಪುಂಡಲೀಕನು ತನ್ನ ತಂದೆತಾ
ಯಿಗಳ ಕಾಲುಗಳನ್ನು ತಿಕ್ಕುತ್ತಾ ಇದ್ದನು. ವಿಷ್ಣು ತನ್ನ ಭೇಟಿ
ಗೆ ಬಂದ ವರ್ತಮಾನ ಕೇಳಲು, ತಾನು ತಂದೆಗೆ ನಿದ್ರೆ ಬಂದ
ಮೇಲೆ ಬರುತ್ತೇನೆ, ಸ್ವಲ್ಪ ಕೂತು ಕೊಳ್ಳಲಿ! ಎಂದು ಒಂದು
ವಿಟೆ ಎಂಬ ಮಣೆಯನ್ನು ಕಳುಹಿಸಿದನು. ಆ ವಿಟೆ ಮಣೆ
ಯಲ್ಲಿ ವಿಷ್ಣುವು ನಿಂತು ಕೊಂಡು, "ಪುಂಡಲೀಕನೇ, ನಿನ್ನ ಭಕ್ತಿ
ಯನ್ನು ನೋಡಿ ಮೆಚ್ಚಿದೆನು; ಬೇಕಾದ ವರವನ್ನು ಕೇಳು!"

ಅಂದನು. ಆ ಮೇಲೆ ಪುಂಡಲೀಕನು ಬಂದು ವಿಷ್ಣುವಿಗೆ ಕೈ ಮುಗಿದು ಹೇಳಿದ್ದು, "ನೀನು ಇದೇ ಪ್ರಕಾರ ವಿಟೆಯ ಮೇಲೆ ನಿಂತು ನಿನ್ನ ದರ್ಶನಕ್ಕೆ ಬಂದವರನ್ನು ಉದ್ಧಾರ ಮಾಡ ಬೇಕೆಂಬ ಇದೇ ನನ್ನ ವಿಜ್ಞಾಪನೆ," ಅಂದನು. ಆಗ ವಿಷ್ಣುವು "ತಥಾಸ್ತು!" ಎಂದು ಹಾಗೆಯೇ ಆ ವಿಟೆ ಮಣೆಯಲ್ಲಿ ನಿಂತು ಕೊಂಡನು. ಅಂದಿನಿಂದ ಆತನಿಗೆ ವಿಠೋಬ ಎಂಬ ಹೆಸರಾಯಿತು.

ಲಕ್ಷ್ಮ: ಈ ಕಥೆ ಯಾವ ಪುರಾಣದಲ್ಲಿ ಉಂಟು?

ಗೋವಿ: ಇದು ಪುರಾಣದಿಂದ ನಾನು ತಿಳಿಯಲಿಲ್ಲ.

ಗಣ: ನಾನು ಹದಿನೆಂಟು ಪುರಾಣ ನೋಡಿದ್ದೇನೆ; ಆದರೆ ಇಂಥಾ ಕಥೆ ನನಗೆ ಶಿಕ್ಕಲಿಲ್ಲ; ಆದಾಗ್ಯೂ ಇತ್ತಕಡೆ ರಚಿಸಲ್ಪಟ್ಟ ಒಂದು ಪುಸ್ತಕದಲ್ಲಿ ಅಂದರೆ ಪಾಂಡುರಂಗಮಹಾತ್ಮೆಯಲ್ಲಿ ವಿಠೋಬನ ವಿಷಯದಲ್ಲಿ ಬೇರೆ ಪ್ರಕಾರವಾದ ಒಂದು ಕಥೆ ಉಂಟು; ಯಾವದೆಂದರೆ: ಒಂದು ಸಾರಿ ಕೃಷ್ಣನು ಬೇರೊಬ್ಬ ಸ್ತ್ರೀಯ ಮೇಲೆ ಮೋಹವಿಟ್ಟಿರಲು, ಅದು ರುಕ್ಮಿಣಿಗೆ ಅಸಮರ್ಪಕವಾಗಿ ಕಂಡದರಿಂದ, ಆ ಸ್ತ್ರೀಯು ಕೃಷ್ಣನನ್ನು ಬಿಟ್ಟು, ಪಂಡರಪುರಕ್ಕೆ ಹೋಗಿ ವಾಸ ಮಾಡಿ ಕೊಂಡಿರುವಾಗ, ಕೃಷ್ಣನು ಅವಳ ವಿಯೋಗದಿಂದ ಮರುಳಾಗಿ, ಸಣ್ಣ ಹುಡುಗನಂತೆ ಕಾಣಿಸಿ ಕೊಂಡು, ದಿಗಂಬರನಾಗಿ, ಅವ

ಳನ್ನು ಹುಡುಕುತ್ತಾ ಪಂಡರಪುರಕ್ಕೆ ಹೋಗಿ, ಅವಳ ಮುಂ
ದೆ ತನ್ನ ನಡುವಿನಲ್ಲಿ ಕೈಗಳನ್ನಿಟ್ಟು ನಿಂತು ಕೊಂಡನು. ಅ
ದೇ ಪ್ರಕಾರ ಇಂದಿನ ತನಕ ನಿಂತು ಕೊಂಡಿರುತ್ತಾನೆ.

ಲಕ್ಷ್ಮು: ಹಾಹಾ! ನೋಡಿರಿ! ಈ ಎರಡು ಕಥೆಗಳು ಒಂ
ದಕ್ಕೊಂದು ವಿರೋಧವಾಗಿರುತ್ತವೆ. ಇವುಗಳಲ್ಲಿ ನಿಜವಾ
ದದ್ದು ಯಾವದು? ಒಂದು ವೇಳೆ ಈ ಎರಡು ಕಥೆಗಳೂ ಸು
ಳ್ಳಾಗಿರ ಬಹುದು. ಒಳ್ಳೇದು, ಅವನನ್ನು ವಿಠಲ ಎಂದು ಹೇ
ಳುತ್ತಾರೆ, ಇದು ಯಾಕೆ?

ಗಣ: ವಿ ಅಂದರೆ ವಿದ್ಯಾ, ಠ ಅಂದರೆ ಇಲ್ಲ, ಲ
ಅಂದರೆ ಅಂಗೀಕರಿಸುವವನು; ಅಂತು ಅವನು ಅಜ್ಞಾನಿ ಜನ
ರನ್ನು ಅಂಗೀಕರಿಸುವವನು ಎಂಬುವದರಿಂದ, ಅವನಿಗೆ ವಿಠ
ಲ ಎಂಬ ಹೆಸರಾಯಿತು.

ಲಕ್ಷ್ಮು: ಶಾಬಾಸ್! ಒಳ್ಳೇ ಅರ್ಥ ಮಾಡಿದ್ಧೀರಿ. ಈ ಅ
ರ್ಥಕ್ಕಿಂತ ಅವನ ಗುಣನಡತೆಗಳ ಪ್ರಕಾರ ಅರ್ಥ ಮಾಡಿದ
ರೆ, ಒಳ್ಳೇದಾಗಿ ಕಾಣುವದು; ಹ್ಯಾಗೆಂದರೆ: ವಿ ಅಂದರೆ ವ್ಯ
ಭಿಚಾರಿ ಠ ಅಂದರೆ ಠಕ್ಕನು, ಲ ಅಂದರೆ ಲಜ್ಜೆಹೀನ ಅಥ
ವಾ ಲಬಾಡಿ ಎಂಬ ಅರ್ಥವು ಆ ದೇವರಿಗೆ ಶೋಭಿಸುವ

ದು. ಒಳ್ಳೇದು, ಶಾಸ್ತ್ರಿಗಳೇ, ಇಂಥಾ ಅಯೋಗ್ಯವಾದ ಪ್ರ ವರ್ತನೆಯಿಂದ ಒಬ್ಬ ಸ್ತ್ರೀಯನ್ನು ಮೋಹಿಸಿ ಕಾಮಾತುರ ದಿಂದ ಅವಳ ಹಿಂದೆ ಹುಡುಕುತ್ತಾ ಹೋಗುವದು ಪರಿಶುದ್ಧ ನಾದ ದೇವರಿಗೆ ಯೋಗ್ಯವಾದದ್ದೋ? ಹೇಳಿರಿ. ಇಲ್ಲವೇ ಇಲ್ಲ. ಇಂಥಾ ದುಷ್ಟತನಕ್ಕೆ ಶಿಕ್ಷೆ ನೇಮಿಸುವ ಪರಿಶುದ್ಧ ದೇ ವರು ಹೀಗೆ ಎಂದಿಗೂ ಮಾಡನೆಂದು ಸ್ವಸ್ಥ ಬುದ್ಧಿಯುಳ್ಳವರು ತಿಳುಕೊಳ್ಳ ಬಹುದು. ಇಂಥಾ ಪಾಪಕ್ಕೆ ಶಿಕ್ಷಾವಚನಗಳ ನ್ನು ಕೆಲವು ಹೇಳುತ್ತೇನೆ:

ಏನು! ಅನ್ಯಾಯಸ್ಥರು ದೇವರ ರಾಜ್ಯವನ್ನು ಬಾಧ್ಯ ವಾಗಿ ಹೊಂದುವದಿಲ್ಲವೆಂದು ಅರಿಯಿರಾ? ಮೋಸ ಹೋ ಗ ಬೇಡಿರಿ; ಜಾರರಾದರೂ, ವಿಗ್ರಹಾರಾಧಕರಾದರೂ, ವ್ಯ ಭಿಚಾರಿಗಳಾದರೂ, ಪುರುಷಸಂಗಮ ಪಡುವವರಾದರೂ ಮಾಡುವವರಾದರೂ, ಕಳ್ಳರಾದರೂ, ಲೋಭಿಗಳಾದರೂ, ಮದ್ಯಪಾನಿಗಳಾದರೂ, ಬೈಯುವವರಾದರೂ, ಕೊಳ್ಳೆಗಾ ರರಾದರೂ, ದೇವರ ರಾಜ್ಯವನ್ನು ಬಾಧ್ಯವಾಗಿ ಹೊಂದರು. (೧ ಕೊರಿ. ೬, ೯. ೧೦.)

ಸುಬ್ರಾ: ಒಳ್ಳೇದು, ಶಾಸ್ತ್ರಿಗಳೇ, ಈ ಪಾಂಡುರಂಗನ ಮಹಾತ್ಮೆಯನ್ನು ಮಾಡಿದವರ್ಯಾರು?

ಗಣ: ಅದು ಶ್ರೀಧರ ಎಂಬವರು ಇನ್ನೂರ ಐವತ್ತು ವರುಷದ ಮುಂಚೆ ಮಾಡಿದರು.

ಲಕ್ಷ್ಮ: ಗೋವಿಂದ ಐತಾಳರೇ, ನೀವು ವಿಠೋಬನ ಕಥೆ ಹೇಳಿದಿರಲ್ಲ? ಅದು ಸಂಭವಿಸಿ ಎಷ್ಟು ವರುಷವಾಯಿತು?

ಗೋವಿ: ಅದು ಸಂಭವಿಸಿ ಈಗ ೨೮ ಯುಗಗಳಾದವು ಎಂತ ಸಾಧುಸಂತರ ಅಭಂಗಗಳಿಂದ ತಿಳಿದು ಬರುತ್ತದೆ. ಆ ಮಹಾರಾಷ್ಟ್ರ ಅಭಂಗದ ಆರಂಭದ ವಚನ ಯಾವದಂದರೆ,

"ಯುಗೆ ಅಟ್ಠಾವಿಸ ವಿಟೆವರಿ ಉಭಾ."

ಇದರ ಅರ್ಥ, 'ಯುಗ ಇಪ್ಪತ್ತೆಂಟು ವಿಟೆಯ ಮೇಲೆ ನಿಂತಿದ್ಧಾನೆ' ಎಂಬ ಈ ಕಾರಣದಿಂದ ಅವನಿಗೆ ವಿಠೋಬನೆಂಬ ಹೆಸರಾಯಿತು.

ಲಕ್ಷ್ಮ: ಇದು ಎಂಥಾ ಹುಚ್ಚು ಮಾತು! ಇದು ಯಾರೋ ಮೂಢ ಸಾಧು ಆಡಿದ ಮಾತು. ಇಂಥಾ ಆಧಾರವಿಲ್ಲದ ಕಥೆಯ ಮೇಲೆ ಭರವಸವಿಟ್ಟು ೨೮ ಯುಗಗಳೆಂದು ಹೇಳುವದು ಹ್ಯಾಗೆ? ಶ್ರೀಧರರು ರಚಿಸಿದ ಪಾಂಡುರಂಗ ಮಹಾತ್ಮೆಯಲ್ಲಿ ಭರವಸವಿಟ್ಟರೆ, ಅದು ಆಗಿ ೨೫೦ ವರುಷವಾಯಿತೆಂದು ಕಾಣುತ್ತದೆ. ನಿಮ್ಮ ಮಾತು ಖರೆಯಾದರೆ,

ಐನೂರು ಆರುನೂರು ವರುಷದ ಪುಸ್ತಕಗಳಲ್ಲಿ ಆದರೂ ಇ
ದು ಇರ ಬೇಕಾಗಿತ್ತು; ಹಾಗಿರದೆ ಇತ್ತಲಾಗೆ ರಚಿಸಿದ ಪುಸ್ತ
ಕಗಳಲ್ಲಿ ಮಾತ್ರ ವಿರೋಬನ ಕಥೆ ವರ್ಣಿಸಿ ಅದೆ.

ಸುಬ್ರಾ: ಒಳ್ಳೇದು, ಪುರಾಣದ ಕಥೆಗಳು ಖರೆಯೋ
ಅಲ್ಲವೋ? ಹೇಳಿರಿ.

ಲಕ್ಷ್ಮ: ಹಾಹಾ! ಪುರಾಣದ ಕಥೆಗಳು ನೀವು ಕೇಳಿದ
ರೆ, ಅವು ಅಜ್ಜಿಕಥೆಗಳೆಂದು ಹೇಳುವಿರಿ. ನಿಮಗೆ ಕೇಳ ಮನ
ಸ್ಸಿದ್ದರೆ, ಒಂದೆರಡು ಹೇಳುವೆನು. ಬಸವಪೂರಾಣದ ಒಂದು
ಕಥೆ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳಿರಿ:

ಒಬ್ಬ ಐಶ್ವರ್ಯವಂತನಾದ ಕುರುಬನಿಗೆ ಒಬ್ಬ ಮಗ
ನಿದ್ದನು. ಅವನು ಒಬ್ಬ ಶಿವಭಕ್ತನು ಲಿಂಗಕ್ಕೆ ಹಾಲಿನಿಂ
ದ ಅಭಿಷೇಕ ಮಾಡುವದನ್ನು ಕಂಡು, ಅದರ ಫಲವೇನೆಂ
ದು ಕೇಳಲು, ಅದಕ್ಕಾ ಶಿವಭಕ್ತನು, ಲಿಂಗಕ್ಕೆ ಹಾಲಿನಿಂದ
ಅಭಿಷೇಕ ಮಾಡಿದವರು ಕೈಲಾಸಕ್ಕೆ ಹೋಗುತ್ತಾರಪ್ಪ, ಅಂ
ದನು. ಅದನ್ನು ಕೇಳಿದ ಆ ಕುರುಬನ ಮಗನಾದ ಯೌವ
ನಸ್ಥನು ಅಂದಿನಿಂದ ತನ್ನ ಮನೆಯಲ್ಲಿ ಹಿಂಡಿದ ಕುರಿಯ ಹಾ
ಲೆಲ್ಲಾ ತಕ್ಕೊಂಡು, ಒಂದು ಆಡಿನ ದೊಡ್ಡ ಲದ್ದಿಯನ್ನು
ಲಿಂಗವೆಂದು, ಕಲ್ಲಿನ ಮೇಲೆ ಇಟ್ಟು, ಅದಕ್ಕೆ ನಿತ್ಯವಾಗಿ ಅಭಿ

ಷೇಕ ಮಾಡುತ್ತಿದ್ದನು. ಹೀಗೆ ನಡಿಯುತ್ತಾ ಇರುವಾಗ್ಯೆ, ಆ ಕುರುಬನು ತಾನು ಹಿಂಡಿದ ಹಾಲು ಕಾಣದೆ ಹೋಗುತ್ತದೆ, ಇದರ ಕಾರಣವೇನೆಂದು ನೋಡುವದಕ್ಕೆ, ಒಂದು ದಿವಸ ಸಾಧಿಸಿ ಮರೆಯಾಗಿ ಕೂತು ನೋಡುವಾಗ್ಯೆ, ಅವನ ಮಗನು ಹಾಲೆಲ್ಲಾ ತಂದು ಆಡಿನ ಲದ್ದಿಯ ಮೇಲೆ ಹೊಯ್ಯುವದನ್ನು ಕಂಡನು. ಆಗ್ಯೆ ಮಗನ ಮೇಲೆ ಆ ಕುರುಬನು ಕೋಪಿಸಿ, ಅವನು ಲಿಂಗವಾಗಿ ಮಾಡಿ ಕೊಂಡ ಆಡಿನ ಲದ್ದಿಯನ್ನು ತುಳಿದು ಹಾಳು ಮಾಡಿದನು. ಆ ಲಿಂಗದ ಧ್ವಂಸವನ್ನು ನೋಡಿದ ಮಗನು ಬಹು ಕೋಪದಿಂದ ಉಗ್ರನಾಗಿ, ಕತ್ತಿ ತಕ್ಕೊಂಡು, ತನ್ನ ತಂದೆಯ ಶಿರಸ್ಸನ್ನು ಕಡಿದು ಹಾರಿಸಿ ಬಿಟ್ಟನು. ತಕ್ಷಣದಲ್ಲೇ ಆ ಶಿವನ ಭಕ್ತನಾದ ಕುರುಬನ ಮಗನು ಕೈಲಾಸಕ್ಕೆ ಹೋದನು.—ಇಂಥ ಕಥೆಯಿಂದ ಯಾವ ಬುದಿ ಕಲಿಯ ಬಹುದು? ನೋಡಿರಿ.

ಸುಬ್ರಾ: ಆಗಲಿ, ಇನ್ನೊಂದು ಪುರಾಣದ ಕಥೆಯನ್ನು ಕೇಳಲಪೇಕ್ಷಿಸುತ್ತೇನೆ, ದಯ ಮಾಡಿ ಹೇಳಿರಿ.

ಲಕ್ಷ್ಮಿ: ಒಳ್ಳೆದು, ಶಿವಪುರಾಣದಿಂದ ಒಂದು ಕಥೆಯನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳಿರಿ:

“ಚೋಳ ದೇಶದಲ್ಲಿ ನಾಗಪಟ್ಟಣ ಉಂಟು. ಅದು ಮೂ

ರು ಲೋಕದಲ್ಲಿಯೂ ಪ್ರಖ್ಯಾತಿ ಪಟ್ಟದ್ದಾಗಿತ್ತು. ಅದರಲ್ಲಿ ಬ್ರಾಹ್ಮಣರಾದ ಜನರು ಅನೇಕ. ಎಲ್ಲಿ ನೋಡಿದರೂ ನವರತ್ನಮಯವಾದ ಮನೆಗಳು. ಅವುಗಳ ಹೊಳಪಿನಿಂದ ರಾತ್ರೆ ಪ್ರಯಾಣಸ್ಥರಿಗೆ ಬೆಳಕುಂಟಾಗಿ, ಹಗಲಿನಂತೆ ಪ್ರಯಾಣ ಮಾಡ ಬಹುದು. ಇಂಥಾ ಶ್ರೇಷ್ಠವಾದ ಪಟ್ಟಣದಲ್ಲಿ ಮೀನದತ್ತನೆಂಬ ಒಬ್ಬ ಬೆಸ್ತನು ಸಮುದ್ರಮೀನುಗಳನ್ನು ಹಿಡಿದು ವ್ಯಾಪಾರ ಮಾಡಿ, ಬಹು ಹಣವನ್ನು ಸಂಪಾದಿಸಿ, ತನ್ನ ಸತಿಯೊಡನೆ ಸಕಲ ಭೋಗಗಳನ್ನು ಅನುಭವಿಸುತ್ತಾ ಇದ್ದನು. ಒಂದು ದಿನ ಅವನು ಕಾವೇರಿಸಂಗಮದಲ್ಲಿ ಮತ್ಸ್ಯಗಳನ್ನು ಹಿಡಿದು ಧಡದಲ್ಲಿ ರಾಶಿ ಮಾಡಿ ವ್ಯಾಪಾರ ಮಾಡುತ್ತಿರಲು, ಆ ಷಾಢಮಾಸದಲ್ಲಿ ಬ್ರಾಹ್ಮಣರೆಲ್ಲರು ಅಮಾವಾಸೆ ದಿವಸ ಆ ಸಂಗಮದಲ್ಲಿ ಸ್ನಾನ ಮಾಡಿ, ಕೆಲವರು ಜಪ ಮಾಡುತ್ತಿದ್ದರು, ಕೆಲವರು ಪುರಾಣ ಓದುತ್ತಿದ್ದರು, ಕೆಲವರು ದಾನಧರ್ಮಗಳನ್ನು ಮಾಡುತ್ತಿದ್ದರು; ಹೀಗಿರುವಾಗ್ಯೆ, ಆ ಬೆಸ್ತನು ಪುರಾಣ ಓದುವ ಬ್ರಾಹ್ಮಣರ ಸಮೀಪ ಬಂದು ನಿಂತಿರಲು, ಆ ಪುರಾಣಿಕರು, "ಪರಮೇಶ್ವರನ ಪಾದಗಳಲ್ಲಿ ಭಕ್ತಿಯುಳ್ಳವರು ಸಕಲ ಪಾಪಗಳನ್ನು ಪರಿಹರಿಸಿ ಕೊಂಡು ಮುಕ್ತರಾಗುವರು; ಮತ್ತು ಪರಮೇಶ್ವರಸ್ವಾಮಿಗೆ ಭಕ್ತಿಯಿಂದ

ತಮ್ಮ ಶಕ್ತ್ಯಾನುಸಾರವಾಗಿ ಹಣ ತಂದು ಸಮರ್ಪಿಸಿದಂಥವ ರಿಗೆ ಪರಮೇಶ್ವರನು ಪ್ರಸನ್ನನಾಗಿ, ಬೇಕಾದ ವರವನ್ನು ಕೊಡುವನು ಎಂಬ ಮಾತನ್ನು ಕೇಳಿ ಆ ಮತ್ಸ್ಯ ಬೇಟೆಗಾರನಾದ ಬೆಸ್ತನು ಪುರಾಣ ಹೇಳುವವರಿಗೆ ನಮಸ್ಕರಿಸಿ, ಅಂದಿನಿಂದ ಅವನು ಮತ್ಸ್ಯಗಳನ್ನು ಮಾರಿದ ಹಣದಲ್ಲಿ ನಾಲ್ಕನೇ ಪಾಲನ್ನು ಪರಮೇಶ್ವರಸ್ವಾಮಿಗೆ ಮೀಸಲಾಗಿರಿಸಿ, ಅವನನ್ನು ನಿತ್ಯವಾಗಿ ಸ್ಮರಿಸಿ, ಈ ಪ್ರಕಾರ ಆರು ವರುಷ ನಿಯಮವನ್ನು ತಪ್ಪದೆ ನಡಿಸಿ, ಭಕ್ತಿಭಾವದಿಂದ ಸೇವೆಯನ್ನು ಮಾಡುತ್ತಿರಲು, ಆ ಪರಮೇಶ್ವರಸ್ವಾಮಿಯವರ ಪ್ರಸಾದದಿಂದ ಒಬ್ಬ ದಿವ್ಯ ಪುರುಷ ಬಾಲಕನ ರೂಪದಲ್ಲಿ ಪ್ರಸನ್ನನಾದನು. ಆಗಲಾ ಮೀನದತ್ತನು ಆ ದಿವ್ಯ ಬಾಲಕನನ್ನು ನೋಡಿ ಸಂತೋಷ ಪಟ್ಟು, ಪರಮೇಶ್ವರಸ್ವಾಮಿಯವರೇ ಈ ರೂಪದಿಂದ ಬಂದಿದ್ಧಾರೆಂದೆಣಿಸಿ, ಅವನನ್ನು ಅತಿ ಮಮತೆಯಿಂದಲೂ ವಿನಯದಿಂದಲೂ ಪರಿಪಾಲನೆ ಮಾಡಿ, ಆತನಿಗೆ ಪ್ಯವನೆಂಬ ಹೆಸರಿಟ್ಟು ಕೈಲಾಸಕ್ಕೆ ಹೋದನು.

ಆ ಬಳಿಕ ಆ ಪ್ಯವನು ಮೀನದತ್ತನು ನಡಿಸಿದ ವೃತ್ತಿಯನ್ನೇ ನಡಿಸಿ, ಜೀವನ ಮಾಡುತ್ತಿದ್ದನು. ಹೀಗಿರುತ್ತಾ ಒಂದು ಫಾಲ್ಗುಣಮಾಸದಲ್ಲಿ ತ್ಯಾಗರಾಜಸ್ವಾಮಿಯವರಿಗೆ

ರಥೋತ್ಸವ ಆಗುತ್ತಿರಲು, ಆ ಪ್ಯವನು ತ್ಯಾಗರಾಜಸ್ವಾಮಿ
ಯವರಿಗೆ ಮನೋಧ್ಯಾನದಿಂದ ಸೇವಿಸಿ, ಸಾಯಂಕಾಲದ
ಸಮಯದಲ್ಲಿ ಒಂದು ಕೆರೆಯ ಸೋಪಾನದಲ್ಲಿ ಕುಳಿತುಕೊಂ
ಡು, ಅಲ್ಲಿ ನಡಿಯುವ ವಿನೋದಗಳನ್ನು ನೋಡುತ್ತಾ ಇರು
ವಾಗ್ಯೆ, ಒಬ್ಬ ಬ್ರಾಹ್ಮಣನು ಆ ಕೆರೆಯಲ್ಲಿ ಸ್ನಾನ ಮಾಡಿ, ಹ
ಣೆಗೆ ವಿಭೂತಿ ಹಚ್ಚಿ, ರುದ್ರಾಕ್ಷೆಮಾಲೆ ಧರಿಸಿ, ಶಿವಪೂಜೆ
ಮಾಡಿ, ನಿರ್ಮಾಲ್ಯದ ಪತ್ರವನ್ನೂ ಪುಷ್ಪಗಳನ್ನೂ ತಿಲಾಕ್ಷತೆ
ಗಳನ್ನೂ ಆ ಕೆರೆಯಲ್ಲಿ ಹಾಕಲು, ಒಂದು ಮತ್ಸ್ಯವು ಬಂದು
ಆ ತಿಲಾಕ್ಷತೆಗಳನ್ನು ಭಕ್ಷಿಸುತ್ತಿರಲು, ಆ ಪ್ಯವನು ಅದನ್ನು
ಹಿಡಿದು ಸಂಹರಿಸ ಪ್ರಯತ್ನ ಮಾಡಲು, ಆ ಬ್ರಾಹ್ಮಣನು ಪ್ಯ
ವನಿಗೆ, ಆ ಮತ್ಸ್ಯವನ್ನು ನೋಯಿಸದೆ ಬಿಟ್ಟು ಬಿಡ ಬೇಕೆನ
ಲು, ಪ್ಯವನು ಅದನ್ನು ಕೇಳಿ, ಮತ್ಸ್ಯವನ್ನು ಬಿಟ್ಟು, ಎದ್ದು, ಕೈ
ಮುಗಿದು—ಸ್ವಾಮಿ ಬ್ರಾಹ್ಮಣಶ್ರೇಷ್ಠರೇ, ಈ ಮತ್ಸ್ಯವನ್ನು ಬಿ
ಟ್ಟದರಿಂದ ಯಾವ ಫಲ ಪ್ರಾಪ್ತಿ ಆಗುವದು? ಎಂದು ಕೇಳಿದ
ನು. ಅದಕ್ಕಾ ಬ್ರಾಹ್ಮಣನು—ಎಲೈ ಪರಮಭಕ್ತರೇ, ಆ ಮ
ತ್ಸ್ಯವನ್ನು ಕೊಲ್ಲದೆ ಬಿಟ್ಟದರಿಂದ ನೀವು ಪರಮೇಶ್ವರನ ಅನು
ಗ್ರಹವನ್ನು ಪಡಕೊಂಡು ಪುಣ್ಯವಂತರಾಗುತ್ತೀರಿ. ಇನ್ನು
ಮುಂದೆ ಪರಮೇಶ್ವರನ ಭಕ್ತಿಯಲ್ಲಿ ಪ್ರವರ್ತಿಸಿರಿ ಎಂದು ಹೇ

ಳಿ, ಅವನಿಗೆ ಅತಿಭಕ್ತನೆಂದು ಹೆಸರಿಟ್ಟು, ವಿಭೂತಿಯನ್ನು ಕೊಟ್ಟು, ಆಶೀರ್ವದಿಸಿ ಹೋದನು. ಅಂದಿನಿಂದ ಅ ಪ್ಯವನು ಪರಮೇಶ್ವರನನ್ನು ಸ್ಮರಿಸಿ, ಮೊದಲು ಶಿಕ್ಕಿದ ಮತ್ಸ್ಯವನ್ನು ಪರಮೇಶ್ವರಸ್ವಾಮಿಗೆ ಸಮರ್ಪಿಸಿ, ಜೀವದೊಡನೆ ಬಿಡುತ್ತಿದ್ದನು. ಹೀಗೆಯೇ ನಡಿಸುತ್ತಾ ಇರುವಾಗ್ಯೆ, ಒಂದು ದಿನ ಪರಮೇಶ್ವರನು ಅವನ ಭಕ್ತಿಯನ್ನು ಪರೀಕ್ಷಿಸುವ ಬಗ್ಯೆ ಒಂದೇ ಮತ್ಸ್ಯವು ಶಿಕ್ಕುವ ಹಾಗೆ ಮಾಡಲು, ಅವನು ಅದನ್ನು ಪರಮೇಶ್ವರನಿಗೋಸ್ಕರ ಬಿಟ್ಟು ಬಿಟ್ಟನು. ಆ ಮೇಲೆ ಪರಮೇಶ್ವರನು ಅವನ್ನ ಹೆಚ್ಚು ಪರೀಕ್ಷೆ ಮಾಡುವದಕ್ಕಾಗಿ, ಒಂದು ಮಹಾ ದೊಡ್ಡ ಚಿನ್ನದ ಮತ್ಸ್ಯವನ್ನು ಅವನ ಬಲೆಯಲ್ಲಿ ಶಿಕ್ಕಗೊಡಿಸಿದನು. ಅದು ಭಾರವಾಗಿರುವದರಿಂದ ಮೇಲೆಕ್ಕೆಳಿಯಲಾರದೆ, ಬೇರೆ ಮೀನು ಹಿಡಿಯುವ ಬೆಸ್ತರನ್ನು ಸಹಾಯಕ್ಕೆ ಕರದು, ಆ ಬಲೆಯನ್ನು ಮೇಲೆ ಎತ್ತಿದಾಗ, ಒಂದೇ ಭಂಗಾರ ದೊಡ್ಡ ಮೀನನ್ನು ಕಂಡು, ಅದನ್ನು ಸಹಾ ಪರಮೇಶ್ವರನಿಗೆ ಸಮರ್ಪಿಸಿ, ಸಮುದ್ರದಲ್ಲಿ ಬಿಟ್ಟನು. ಆಗ ಪರಮೇಶ್ವರಸ್ವಾಮಿಯು ಅತಿಭಕ್ತನಿಗೆ ಮೆಚ್ಚಿ, ವೃಷಭಾರೂಢನಾಗಿ, ಪಾರ್ವತಿ ಸಮೇತ ಪ್ರಮಥ ಗಣಗಳೊಡನೆ ಕೂಡಿ ಬಂದು, ಅವನಿಗೆ ಪ್ರಸನ್ನನಾಗಿ ಮುಂದೆ ನಿಂತು—ಎಲ್ಯೆ ಅತಿಭಕ್ತ

ನೇ, ನಿನ್ನ ಭಕ್ತಿಯಿಂದ ನನಗೆ ಸಂತೋಷವಾಯಿತು; ನಿನಗೆ ಮುಕ್ತಿಯನ್ನು ಕೊಡುತ್ತೇನೆಂದು ತನ್ನ ವಿಮಾನವನ್ನೇರಿಸಿದಾಗ, ಅಲ್ಲಿರುವ ಬೇರೆ ಬೆಸ್ತರೆಲ್ಲರು ಪರಮೇಶ್ವರನಿಗೆ ನಮಸ್ಕರಿಸಿ, ಸ್ತುತಿಸಿ, ಬಂದ ವಿಮಾನದಲ್ಲಿ ಶೇರಿ, ಎಲ್ಲರು ಕೈಲಾಸಕ್ಕೆ ಹೋದರು.—ಹೀಗೆಯೇ ಪುರಾಣದ ಕಥೆಗಳು ಬಹಳವೆ.

ಸುಬ್ರಾ: ಸರಿ! ಸರಿ! ಇವು ಅಜ್ಜಿಕಥೆಗಳೆಂಬುವದಕ್ಕೆ ಸಂಶಯವಿಲ್ಲ. ಮೊದಲನೇ ಬಸವಪುರಾಣದ ಕಥೆಯಿಂದ ತಂದೆಯ ಹತ್ಯ ಮಾಡಿದ ಕುರುಬನಿಗೆ ಕೈಲಾಸ ಶಿಕ್ಕಿತು. ಈ ಎರಡನೇ ಕಥೆಯಿಂದ ಮೀನು ಹತ್ಯ ಮಾಡಿದ ಅಂಬಿಗರಿಗೆ ಕೈಲಾಸ ಶಿಕ್ಕಿತು ಎಂದು ಕಾಣುತ್ತದೆ. ಈ ಪ್ರಕಾರ ಶಿವನ ಭಕ್ತಿಯಿಂದ ಮುಕ್ತಿ ಪಡ ಕೊಳ್ಳುವದು ಸುಲಭವಾಗಿದೆಂದು ಕಾಣುತ್ತದೆ.

ಗಣ: ಖರೆ! ಖರೆ! ಶಿವನ ಭಕ್ತರಿಗೆ ಕೈಲಾಸವು ಸುಲಭವಾಗಿ ಶಿಕ್ಕುತ್ತದೆ; ಅದಕ್ಕೆ ಸಂಶಯವಿಲ್ಲ. ನೀವು ಲಕ್ಷ್ಮಣರಾಯರ ಕಡೆಗೆ ಶೇರಿ, ಶಿವನನ್ನು ನಿಂದಿಸ ಬೇಡಿರಿ.

ಲಕ್ಷ್ಮ: ನಾನು ಶಿವನನ್ನು ನಿಂದಿಸುವದಿಲ್ಲ; ಶಾಸ್ತ್ರಗಳನ್ನು ಶೋಧಿಸಿ ಮಾತಾಡುತ್ತೇನೆ. ಶಿವನ ಭಕ್ತರಿಗೆ ಮುಕ್ತಿ ಶಿಕ್ಕುವದು ಸುಲಭವಾಗಿದೆಂದು ಹೇಳಿದ್ಧೀರಷ್ಟೆ; ಅದು ಹ್ಯಾಗೆ?

ನೀವು ವಿಶಿಷ್ಟ ಪುರಾಣಗಳನ್ನು ಓದಿ ನೋಡಲಿಲ್ಲವೆಂದು ಕಾ ಣುತ್ತದೆ. ಶಿವನು ತಾನೇ ಮಾಡಿದ ವ್ಯಭಿಚಾರದೋಷಕ್ಕಾಗಿ ಋಷಿಗಳಿಂದ ಹೊಂದಿದ ಶಾಪವನ್ನು ಪರಿಹರಿಸಿ ಕೊಳ್ಳ ಕೂಡದೆ, ತನ್ನ ಲಿಂಗವನ್ನು ಕಳಕೊಂಡನು. ವೃಕಾಸುರನಿಗೆ ತಾನೆ ಕೊಟ್ಟ ವರದ ಶಕ್ತಿಗೆ ಎದುರು ನಿಲ್ಲ ಕೂಡದೆ, ಅವನು ತಲೆಯ ಮೇಲೆ ಕೈ ಇಡುವದಕ್ಕೆ ಬಂದಾಗ, ತಾನು ಸುಟ್ಟು ಭಸ್ಮವಾಗುವೆನೆಂದು ಭಯ ಪಟ್ಟು, ಓಡಿ ಹೋದನು. ವಿಷ ನಂಜು ಕುಡಿದಾಗ, ಅದರ ಜ್ವಾಲೆಯನ್ನು ತಾಳ ಕೂಡದೆ ಗಂಗೆಯನ್ನು ನಿತ್ಯವಾಗಿ ಶಿರಸ್ಸಿನಲ್ಲಿಟ್ಟು ಕೊಂಡನು. ಈ ಪ್ರಕಾರ ಅವನು ಅಶಕ್ತನೆಂದು ಪುರಾಣಗಳಿಂದ ಕಂಡು ಬರುವಾಗ್ಯೆ, ಅವನು ಪರರ ಪಾಪದೋಷಗಳನ್ನು ಪರಿಹರಿಸಿ, ಮೋಕ್ಷ ಕೊಡುವದು ಹ್ಯಾಗೆ? ಇದಲ್ಲದೆ ಭಾಗವತದಲ್ಲಿ ಯಾರು ಈಶ್ವರನ ಪೂಜೆ ಮಾಡುತ್ತಾರೋ, ಅವನ ಉಪದೇಶಗಳನ್ನು ಯಾರು ಕೈಕೊಳ್ಳುತ್ತಾರೋ ಅವರು ಪಾಷಂಡರಾಗಿದ್ದಾರೆಂದು ಬರದದೆ. ಈ ಪ್ರಕಾರ ಹಿಂದು ಶಾಸ್ತ್ರಗಳಲ್ಲಿ ಅನೇಕ ವಿರೋಧಗಳು ಇರುವದರಿಂದ ನಿಜವಾದ ದೇವರ್‍ಯಾರೆಂದು ತಿಳಿಯ ಕೂಡದು.

ಗಣ: ಲಕ್ಷುಮಣರಾಯರೇ, ನೀವು ಅವಿಶ್ವಾಸಿಗಳಾಗಿ

ಧ್ಧೀರಿ; ಗೋವಿಂದ ಐತಾಳರು ಪಕ್ಷಪಾತಿಯಾಗಿದ್ದಾರೆ; ಸುಬ್ರಾಯರು ಶಾಸ್ತ್ರಗಳನ್ನು ಅರಿಯದವರಾಗಿರುತ್ತಾರೆ.

ಲಕ್ಷ್ಮ: ಶಾಸ್ತ್ರಿಗಳೇ, ನನ್ನ ಮೇಲೆ ದೊಡ್ಡ ಅಪವಾದ ಹೊರಿಸುತ್ತೀರಿ. ನಾನು ಅವಿಶ್ವಾಸಿಯಲ್ಲ, ಸತ್ಯವನ್ನು ಶೋಧಿಸುವವನೆಂದು ನಿಮಗೆ ಮುಂಚೆ ಹೇಳಿದ ಹಾಗೆಯೇ ಈಗಲು ಹೇಳುತ್ತೇನೆ. ನನ್ನ ಪಾಪದ ಭಾರವು ದೊಡ್ಡದಾಗಿರುವದರಿಂದ ನಿಜ ದೇವರನ್ನು ತಿಳು ಕೊಂಡು, ಆತನ ಕೃಪೆಯಿಂದ ನಿತ್ಯಾನಂದವನ್ನು ಹೊಂದ ಬೇಕೆಂಬ ಅಪೇಕ್ಷೆ ಉಳ್ಳವನಾಗಿದ್ದೇನೆ. ನೀವು ಹಿಂದು ಶಾಸ್ತ್ರಗಳನ್ನು ಮಾತ್ರ ಓದಿದ್ಧೀರಿ. ಅವುಗಳೆಲ್ಲಾ ಈ ಹಿಂದುಸ್ಥಾನದಲ್ಲಿ ಮಾತ್ರ ಅಡಗಿರುತ್ತವೆ ಹೊರ್ತು, ಹಿಮಾಲಯದ ಆಚೆ ಕಡೆ ದೇಶಗಳ ಸಮಾಚಾರವೇನಾದರೂ ಹೇಳುವದಿಲ್ಲ. ಬೇರೆ ದೇಶಗಳಲ್ಲಿ ಇಂಥಾ ಶಾಸ್ತ್ರಗಳೂ ಇಲ್ಲ, ಇಂಥಾ ದೇವರುಗಳೂ ಇಲ್ಲ. ನೀವು ಲೋಕಚರಿತ್ರೆಗಳನ್ನೂ ಭೂಗೋಳ ಇತ್ಯಾದಿ ಭೂಶಾಸ್ತ್ರವನ್ನೂ ಓದಿದರೆ, ನೀವು ಹಿಂದುಶಾಸ್ತ್ರದ ವಿಷಯವಾಗಿ ಇಷ್ಟು ಪಕ್ಷಪಾತ ಹಿಡಿದು ಮಾತಾಡುತ್ತಿದ್ದಿಲ್ಲ. ನಾವು ಇರುವ ಈ ಹಿಂದುಸ್ಥಾನ ಎಂಬ ಜಂಬುದ್ವೀಪವು ಭೂಲೋಕದ ಒಂದು ಚಿಕ್ಕ ಅಂಶವೆಂದು ತಿಳು ಕೊಳ್ಳಿರಿ.

ಗಣ: ಹಾಗಾದರೆ ಸಮ, ಈಗ ತಿಳಿಯಿತು. ನೀವು ಪಾದ್ರೀ ಶಾಸ್ತ್ರ ಓದಿದ್ಧೀರಿ ಎಂಬುವದಕ್ಕೆ ಸಂಶಯವಿಲ್ಲ. ಆ ಮ್ಲೇಂಛರ ಶಾಸ್ತ್ರ ನಮಗ್ಯಾಕೆ? ಅದರಲ್ಲಿ ಎಂಥಾ ನೀತಿ ಇದ್ದೀತು? ಅವರ ಶಾಸ್ತ್ರವನ್ನು ಓದಿದರೆ, ಜಾತಿ ಕೆಟ್ಟು ಹೋಗ ಬೇಕಾದೀತು.

ಲಕ್ಷ್ಮ: ಏನು ಮಾತಾಡುತ್ತೀರಿ! ಅವರ ಶಾಸ್ತ್ರದಲ್ಲಿ ನೀತಿ ಇಲ್ಲವೆಂದು ನಿಮಗೆ ಹ್ಯಾಗೆ ತಿಳಿಯಿತು? ಅದನ್ನು ಓದಿದ್ಧೀರೋ? ಸ್ವಲ್ಪ ಹೊತ್ತಿನ ಮುಂಚೆ ನಾನು ಅವರ ಶಾಸ್ತ್ರದ ಕೆಲವು ಶ್ಲೋಕಗಳನ್ನು ಸಂಸ್ಕೃತದಲ್ಲಿ ಹೇಳಿದೆ; ಅವು ದಿವ್ಯ ವಾಕ್ಯಗಳೂ ಅವು ಒಳ್ಳೇ ಜ್ಞಾನವನ್ನು ಬೋಧಿಸುವವುಗಳೂ ಎಂಬದಾಗಿ ಹೇಳಿದ್ಧೀರಿ; ಈಗ ಆ ಮಾತಿಗೆ ವಿರೋಧವಾಗಿ, ಪಾದ್ರಿಸಾಹೇಬರು ಮ್ಲೇಂಛರಾಗಿರುವದರಿಂದ ಅವರ ಶಾಸ್ತ್ರದಲ್ಲಿ ನೀತಿ ಇಲ್ಲವೆಂದು ಹೇಳುತ್ತೀರಿ. ಇದೆಂಥಾ ಮಾತು! ಮನಸೋ ಇಚ್ಛೆ ಪ್ರಕಾರ ಮಾತಾಡುವದು ನಿಮ್ಮಂಥಾ ಶಾಸ್ತ್ರಿಗಳಿಗೆ ತಕ್ಕದಲ್ಲ. ನೀವು ಪಕ್ಷಪಾತ ಬಿಟ್ಟು ವಿಚಾರಿಸಿದರೆ, ಸತ್ಯ ಮಾರ್ಗವು ನಿಮಗೆ ಬೇಗ ತಿಳಿಯುವದು.

ಸುಬ್ರಾ: ಪಾದ್ರಿಸಾಹೇಬರ ಶಾಸ್ತ್ರದಲ್ಲಿ ನೀತಿ ಉಂಟೆಂದು ಕಾಣುತ್ತದೆ; ಹ್ಯಾಗೆಂದರೆ, ಅವರಲ್ಲಿ ಸುಳ್ಳು ಮೋಸ ಅನ್ಯಾಯ ವ್ಯಭಿಚಾರ ಇತ್ಯಾದಿ ದುಷ್ಟ ಕ್ರಿಯೆಗಳು ಇಲ್ಲ

ವೆಂದು ಅವರ ನಡತೆಯಿಂದಲೂ, ಅವರು ಬೀದಿಯಲ್ಲಿ ಸಾರಿ ಹೇಳುವ ಅವರ ಶಾಸ್ತ್ರಬೋಧನೆಯಿಂದಲೂ ಕಂಡು ಬರುತ್ತದೆ. ಇದಲ್ಲದೆ ಅವರು ಪ್ರೀತಿಯುಳ್ಳವರೂ ಪರೋಪಕಾರಸ್ಥರೂ ಎಂಬುವದಕ್ಕೆ ಸಂಶಯವಿಲ್ಲ; ಯಾಕಂದರೆ ಅವರು ಊರೂರಿನಲ್ಲಿ ಸಾಲೆಗಳನ್ನು ಸ್ಥಾಪಿಸಿ ಬಡ ಜನರ ಮಕ್ಕಳಿಗೂ ದೊಡ್ಡವರ ಮಕ್ಕಳಿಗೂ ವಿದ್ಯೆಬುದ್ಧಿಗಳನ್ನು ಕಲಿಸಿ ಬುದ್ಧಿವಂತರಾಗ ಮಾಡುತ್ತಾರೆಂಬುವದು ನಾವು ಕಣ್ಣಾರೆ ನೋಡುತ್ತೇವೆ.

ಲಕ್ಷ್ಮು: ಸುಬ್ರಾಯರೇ, ನೀವು ಸರಿಯಾಗಿ ಆಲೋಚನೆ ಮಾಡಿ, ಪಕ್ಷಪಾತವಿಲ್ಲದೆ ಮಾತಾಡಿದ್ಧೀರಿ. ಮತ್ತೊಂದು ನಾನು ಹೇಳುತ್ತೇನೆ; ಪಾದ್ರಿಸಾಹೇಬರು ವಿದ್ವಾಂಸರೂ ಸಕಲ ಶಾಸ್ತ್ರ ಓದಿದ ಪಂಡಿತರೂ ಆಗಿದ್ದು, ಅಂಥವರು ಸುಳ್ಳು ಶಾಸ್ತ್ರವನ್ನು ಹಿಡಿದು, ಬೀದಿಬೀದಿಗೆ ಹೋಗಿ, ಅದು ಸತ್ಯ ಶಾಸ್ತ್ರವೆಂದು ಜನರಿಗೆ ಸಾಕ್ಷಿ ಕೊಟ್ಟು, ಇಷ್ಟು ಕಷ್ಟ ಶ್ರಮೆ ಅಪಮಾನ ಪಡುವರೋ? ಯಾರಾದರೂ, ಜನರಿಂದ ತಮಗೆ ಮಾನ ಘನ ಆದಾಯ ಬರುವ ಹಾಗೆ, ಉಪದೇಶ ಹೇಳುವದುಂಟು; ಆದರೆ ತಮಗೆ ಅಪಮಾನವೂ ಉಪದ್ರವೂ ಬರುವ ಹಾಗೆ ಯಾರಾದರೂ ಉಪದೇಶ ಹೇಳರು.

ಗಣ: ಒಳ್ಳೇದು, ನೀವು ಹೇಳಿದ ಮಾತುಗಳನ್ನು ಸಂಗತಿಗಳನ್ನು ಎಲ್ಲಾ ಗ್ರಹಿಸಿ ಕೊಂಡೆ. ಹಾಗಾದರೆ ಆ ಪಾದ್ರಿ ಸಾಹೇಬರ ಸಂಗಡ ಸ್ವಲ್ಪ ಸಂಭಾಷಣೆ ಮಾಡಿ, ಹಿಂದು ಮಾರ್ಗವು ಹ್ಯಾಗೆ ಉಂಟಾಯಿತೆಂದೂ ಸತ್ಯ ಮಾರ್ಗ ಯಾವದೆಂದೂ ವಿಚಾರಿಸ ಬೇಕೆಂದು ಇಚ್ಛೈಸುತ್ತೇನೆ. ಆದ ಕಾರಣ ನನಗೆ ಅವರ ಭೇಟಿ ಮಾಡಿಸಿರಿ.

ಲಕ್ಷು: ಒಳ್ಳೇದು, ನಿಮಗೆ ನನ್ನ ಹಾಗೆ ನಿಜ ದೇವರ ಮಾರ್ಗವನ್ನು ಕುರಿತು ವಿಚಾರಣೆ ಮಾಡುವದಕ್ಕೆ ಮನಸ್ಸಿದ್ದರೆ, ಪಾದ್ರಿಸಾಹೇಬರ ಬಂಗ್ಲೆಗೆ ಹೋಗುವಾ.

ಈ ಪ್ರಕಾರ ಅವರೆಲ್ಲರು ಪಾದ್ರಿಸಾಹೇಬರ ಬಂಗ್ಲೆಗೆ ಬಂದು ಸಂಭಾಷಣೆ ಮಾಡಿದ್ದು:—

ಪಾದ್ರಿಸಾಹೇಬರು: ನೀವು ಎಲ್ಲರು ಕೂಡಿ, ಈ ಉದಯ ಕಾಲದಲ್ಲಿ ಇಲ್ಲಿಗೆ ಬಂದ ಕಾರಣವೇನು? ಹೇಳಿರಿ.

ಗಣ: ನೀವು ಸಕಲ ಶಾಸ್ತ್ರಪುರಾಣಗಳ ಶೋಧನೆ ಮಾಡಿದ್ಧೀರೆಂದು ನಾನು ಕೇಳಿ, ನಮ್ಮ ಹಿಂದು ಮಾರ್ಗದ ಉತ್ಪತ್ತಿ ಹ್ಯಾಗೆ ಉಂಟಾಯಿತು? ಎಂದು ತಿಳ ಕೊಂಡು, ಸತ್ಯ ಮಾರ್ಗವನ್ನು ಕಂಡು ಕೊಳ್ಳುವದಕ್ಕೆ ಬಂದಿದ್ಧೇನೆ; ದಯ ಮಾಡಿ ನನಗೆ ತಿಳಿಸಿರಿ.

ಪಾದ್ರಿ: ಈ ಮುಖ್ಯ ಪ್ರಯೋಜನವಾದ ಸಂಗತಿಗಳನ್ನು ವಿಚಾರಿಸುವದು ಬುದ್ಧಿವಂತರ ಕೆಲಸವಾಗಿದೆ. ಇದಕ್ಕಾಗಿ ನನ್ನ ಬಳಿಗೆ ಬಂದದ್ದು ಬಹು ಸಂತೋಷವಾಯಿತು. ಹಿಂದು ಮತವನ್ನು ಕುರಿತು ತಿಳ ಕೊಳ್ಳ ಬೇಕಾದರೆ, ಮೊದಲು ಅದು ಬೆಳದ ರೀತಿಯನ್ನೂ, ಅದು ಹುಟ್ಟಿದಾಗ ಹಿಂದು ಜನರು ಇದ್ದ ಸ್ಥಿತಿಯನ್ನೂ ಸ್ವಲ್ಪ ವಿಚಾರಿಸುವದು ಒಳ್ಳೇದು. ಈಗಿನ ಹಿಂದು ಜನರು ಆಸ್ಯಾ ಖಂಡದ ಮಧ್ಯ ಶೀಮೆಗಳಿಂದ ಬಂದ ಆರ್ಯ ಎಂಬ ವಂಶಸ್ಥರಿಂದ ಹುಟ್ಟಿದವರು. ಆರ್ಯರಂದರೆ ಘನವುಳ್ಳವರು. ಈ ವಂಶಸ್ಥರೇ ಪೂರ್ವದಲ್ಲಿ ಗ್ರೀಸ್ ಇತಲ್ಯ ಉತ್ತರ ಯುರೋಪ ಎಂಬ ವಿಲಾಯಿತಿ ದೇಶಗಳನ್ನು ವಶೀಕರಿಸಿದವರು. ಇವರಲ್ಲಿ ಕೆಲವರು ಪೂರ್ವ ದಿಕ್ಕಿಗೂ ಕೆಲವರು ಪಶ್ಚಿಮ ದಿಕ್ಕಿಗೂ ಪ್ರಯಾಣ ಮಾಡಿದರು. ಹೀಗೆ ಮುಖ್ಯ ರಾಜ್ಯದವರಾದ ವಿಲಾಯಿತಿಯವರೂ ಹಿಂದು ಜನರೂ ಒಂದೇ ಮೂಲದಿಂದ ಉತ್ಪತ್ತಿಯಾದಂಥವರಾಗಿದ್ದಾರೆ. ಇವರ ವಂಶವು ಮೊದಲು ಫಾರ್ಶಿ ದೇಶದ ಉತ್ತರ ಕಡೆಯಲ್ಲಿ ಉತ್ಪತ್ತಿಯಾಗಿ, ಒಂದು ಭಾಗವು ಪಶ್ಚಿಮ ಕಡೆ ಯುರೋಪ ದೇಶಗಳಿಗೂ ಮತ್ತೊಂದು ಭಾಗ ಪೂರ್ವ ಕಡೆ ಪಂಜಾಬ ದೇಶಕ್ಕೂ ಹೋಗಿ, ಸಂಚಾರ ಮಾ

ಡಿದ ಹಾಗೆ ಕಾಣುತ್ತದೆ. ಹೀಗಿರುತ್ತಾ ಆಗ್ಯಾಗ್ಯೆ ಈ ಹಿಂ
ದು ದೇಶಕ್ಕೆ ಬರುವವರು ಹೆಚ್ಚಿದರಿಂದ, ಅವರ ರಾಜ್ಯವು ವಿ
ಸ್ತಾರವಾಗಿ ಬಲವಾಗುತ್ತಾ ಬಂತು. ಇವರು ಹಿಂದು ದೇ
ಶಕ್ಕೆ ಬಂದಾಗ, ವಿದ್ಯೆ ಬುದ್ಧಿ ಇಲ್ಲದ ಬೇರೊಂದು ಭಾಷೆ ಮಾ
ತಾಡುವ ಮೂಲನಿವಾಸಿಗಳನ್ನು ಕಂಡರು. ಇವರನ್ನು ಆ
ರ್ಯರು ಕ್ರಮೇಣವಾಗಿ ವಶ ಮಾಡಿ ಕೊಂಡು, ತಮಗೆ ದಾ
ಸರಾಗ ಮಾಡಿ ಕೊಂಡರು. ಇವರು ಈಗಿರುವ ಎಲ್ಲಾ ಶೂ
ದ್ರರೆನ್ನ ಬಹುದು. ಹೀಗೆ ಜಯಿಸಲ್ಪಟ್ಟ ಸಿಥಿಯರ ವಂಶದವ
ರು ತಮಗಿಂತ ಮುಂಚೆ ಬಂದು ಹಿಂದು ದೇಶದ ಉತ್ತರ
ಕಡೆಯಲ್ಲಿ ನಿವಾಸಿಸಿ ಕೊಂಡಿದ್ದವರನ್ನು ಜಯಿಸಿ, ದಕ್ಷಿಣ
ಕಡೆಗೆ ಓಡಿಸಿದರು. ಈ ಪ್ರಕಾರ ಜಯಿಸಲ್ಪಟ್ಟವರಿಗೆ ದ್ರಾ
ವಿಡರೆಂಬ ಹೆಸರಾಯಿತು. ಇವರು ಆಡಿದ ಭಾಷೆಗಳಿಂದ
ಅರವ ಮಲಯಾಳ ತೆಲಗು ಕನ್ನಡು ಎಂಬ ಈ ನಾಲ್ಕು
ಭಾಷೆಗಳು ಹುಟ್ಟಿದವು. ದ್ರಾವಿಡರಂದರೆ "ಕೆಟ್ಟು ಹೋದ
ಕ್ಷತ್ರಿಯರಿಂದ ಹುಟ್ಟಿದ ಜಾತಿಭ್ರುಷ್ಟರು" ಎಂದು ಸಂಸ್ಕೃತದ
ಲ್ಲಿ ಅರ್ಥವಾಗುತ್ತದೆ. ಉತ್ತರ ಹಿಂದುಸ್ಥಾನದ ಬ್ರಾಹ್ಮಣರು
ಬುದ್ಧಿಚಾತುರ್ಯ ಹೊಂದದೆ ಇದ್ದ ದಕ್ಷಿಣ ಹಿಂದುಸ್ಥಾನ
ದವರಿಗೆ ಈ ಹೆಸರು ಇಟ್ಟರೆಂದು ಕಾಣುತ್ತದೆ. ಬ್ರಾಹ್ಮಣ

ಕ್ಷತ್ರಿ ವೈಶ್ಯ ಎಂಬ ಇವರ ಪಿತೃಗಳಾದ ಆರ್ಯರಲ್ಲಿ ಒಂದು ಭಾಗದವರು ಹಿಂದುಸ್ಥಾನಕ್ಕೆ ಬರುವದಕ್ಕಿಂತ ಮುಂಚೆ ಶೂದ್ರರೆಂದು ಕರಿಯಲ್ಪಟ್ಟ ಇನ್ನೊಂದು ಭಾಗದವರು ಹಿಂದುಸ್ಥಾನಕ್ಕೆ ಬಂದು ಮುಂಚೆ ಮೂರು ಭಾಗಗಳಾಗಿ ಬಂದು ವಾಸ ಮಾಡಿದವರಿಂದ ಪ್ರತ್ಯೇಕಿಸಲ್ಪಟ್ಟವರಾಗಿ ಜೀವಿಸಿದ ಹಾಗೆ ಕಾಣುತ್ತದೆ. ಮತ್ತು ಇವರು ಆ ಮುಂಚೆ ಬಂದವರನ್ನು ಜಯಿಸಿದರು; ಆ ಮೇಲೆ ದ್ರಾವಿಡರೂ ಜಯಿಸಲ್ಪಟ್ಟವರೂ ಮಿಶ್ರವಾಗಿ, ಈಗಿನ ಕಾಲದ ಶೂದ್ರರಾಗಿದ್ದಾರೆ.

ಆದರೆ ಹೊಲೆಯರು ದ್ರಾವಿಡರಲ್ಲಿ ಒಂದು ಭಾಗದವರಾಗಿರುತ್ತಾರೆ. ಇವರು ದ್ರಾವಿಡರಲ್ಲಿ ಬಲಿಷ್ಠರಾದವರಿಂದ ಗುಲಾಮರಾದರೋ? ಇಲ್ಲವೇ ದ್ರಾವಿಡರಿಗಿಂತ ಮುಂಚೆ ಹಿಂದುಸ್ಥಾನದಲ್ಲಿ ವಾಸ ಮಾಡಿದವರಾಗಿದ್ದು, ಅವರು ಬಂದ ಕಾಲದಲ್ಲಿ ಅವರಿಂದ ಜಯಿಸಲ್ಪಟ್ಟು ಗುಲಾಮರಾದರೋ? ಎಂಬುವದು ಚನ್ನಾಗಿ ತಿಳಿಯುವದಿಲ್ಲ. ಹೊಲೆಯರೂ ದ್ರಾವಿಡರಲ್ಲಿ ಶ್ರೇಷ್ಠ ಜಾತಿಯವರೂ ಒಂದೇ ಭಾಷೆಯನ್ನಾಡುವದರಿಂದ, ಪೂರ್ವದಲ್ಲಿ ಇವರೆಲ್ಲ ಒಂದೇ ಜಾತಿಯವರಾಗಿದ್ದು, ಇವರಲ್ಲಿ ಬಲಿಷ್ಠರಾದವರಿಂದ ಈಗ ಹೊಲೆಯರಾಗಿರುವವರು ಜಯಿಸಲ್ಪಟ್ಟು, ತಿರಸ್ಕರಿಸಲ್ಪಟ್ಟರೆಂದು ಕಾಣುತ್ತದೆ.

ಕಾಲಾಂತರದಲ್ಲಿ ಆರ್ಯರು ಹೆಚ್ಚುತ್ತಾ ಬಂದ ಹಾಗೆ ತಮ್ಮ ಸಂಸ್ಕೃತ ಭಾಷೆಯನ್ನೂ ಅಧಿಕಾರವನ್ನೂ ರಾಜ್ಯವನ್ನೂ ವೃದ್ಧಿ ಮಾಡುತ್ತಾ ಬಂದರು. ಈ ಪ್ರಕಾರ ಅವರ ಬುದ್ಧಿ ನಡತೆ ಇತ್ಯಾದಿ ಮರ್ಯಾದೆಗಳು ಅಭಿವೃದ್ಧಿ ಹೊಂದುತ್ತಾ ಬಂದದರಿಂದ, ಅವರು ಬಲವುಳ್ಳ ರಾಜ್ಯಗಳನ್ನು ಸ್ಥಾಪಿಸಿದರು. ಅವರು ಸೂಕ್ಷ್ಮ ಬುದ್ಧಿಯುಳ್ಳವರಾಗಿಯೂ ದೃಢ ಮನಸ್ಸು ಉಳ್ಳವರಾಗಿಯೂ ಇದ್ದರು. ಚರಿತ್ರೆದೃಷ್ಟಾಂತಗಳಿಂದ ಕಾಣುವದೇನಂದರೆ: ಕ್ರಿಸ್ತನ ಅವತಾರದ ೩೨೮ ವರುಷದ ಮುಂಚೆ ದೊಡ್ಡ ಅಲೆಕ್ಸಂದರ ಎಂಬ ಅರಸನು ಪಂಜಾಬಿಗೆ ಬಂದಾಗ, ಉತ್ತರ ಹಿಂದುಸ್ಥಾನವೆಲ್ಲ ಆರ್ಯರ ಆಧೀನದಲ್ಲಿತ್ತು. ಆದ ಕಾರಣ ಅದಕ್ಕೆ ಆರ್ಯಾವರ್ತ ಎಂಬ ಹೆಸರಾಯಿತು.

ಆರ್ಯವಂಶವೂ ರಾಜ್ಯವೂ ಹೆಚ್ಚಾಗುತ್ತಾ ಬರುವಾಗ, ಪೂರ್ವದ ನಿವಾಸಿಗಳನ್ನು ನಿರ್ಮೂಲ ಮಾಡದೆ ಕಾಪಾಡಿದರೆಂಬುವದಕ್ಕೆ ಒಂದು ಒಳ್ಳೇ ದೃಷ್ಟಾಂತ ಕಾಣುತ್ತದೆ. ಅವರು ತಮಗೆ ವಿಧೇಯರಾದವರೆಲ್ಲರನ್ನು ಅವರವರ ಊರುಗ್ರಾಮಗಳಲ್ಲಿಯೇ ವಾಸಿಸಿ ಕೊಂಡು ವ್ಯವಸಾಯ ಮಾಡುವ ಹಾಗೆ ಸ್ಥಳ ಕೊಟ್ಟದರಿಂದ, ಅವರವರು ಕ್ರಮೇ

ಣವಾಗಿ ತಮ್ಮನ್ನು ಆಳುವ ವಂಶದವರೊಡನೆ ಮಿಶ್ರವಾ
ದರು.

ಇದಲ್ಲದೆ ಜಯಿಸಲ್ಪಟ್ಟಾಗ್ಯೂ ಅವರೊಡನೆ ಮಿಶ್ರವಾಗ
ದಂಥ ಕುಲಗಳು ದೊಡ್ಡ ಹಿಂದು ರಾಜ್ಯದ ಸುತ್ತಮುತ್ತ
ಇದ್ದರು. ಇವರು ತಮ್ಮ ಶತ್ರುಗಳು ಹಿಡಿಯದ ಹಾಗೆ ಗು
ಡ್ಡಗಳ ಮೇಲೆಯೂ ಅಡವಿಗಳಲ್ಲಿಯೂ ವಾಸಿಸಿ, ಸ್ವತಂತ್ರ ಉ
ಳ್ಳವರಾಗಿ, ಇಂದಿನ ವರೆಗೂ ಜೀವಿಸುತ್ತಾ ಇದ್ದಾರೆ.

ಬುದ್ಧಿಯುಳ್ಳ ಆರ್ಯವಂಶದವರು ವೇದ ಇತ್ಯಾದಿ ಶಾ
ಸ್ತ್ರಗಳನ್ನು ರಚಿಸಿ, ತಾವು ಮಾತ್ರ ಆಚಾರ್ಯರಾಗಿಯೂ
ಎಲ್ಲಾ ಜನರನ್ನು ಆಳ ಬೇಕೆಂಬ ಅತ್ಯಾಶೆಯುಳ್ಳವರಾಗಿಯೂ
ಇದ್ದು, ತಮ್ಮ ಮತವು ಭಯಮೂಲಕವಾಗಿ ವಿಸ್ತಾರ ಮಾ
ಡುವದಕ್ಕೆ ಪ್ರಯಾಸ ಪಟ್ಟರು. ಆದಾಗ್ಯೂ ಕ್ಷತ್ರಿಯರು ವಿ
ರೋಧವಾಗಿ ನಿಂತದರಿಂದ ಅವರೊಡನೆ ಅನೇಕ ಕ್ರೂರ
ವಾದ ಯುದ್ಧಗಳನ್ನು ನಡಿಸಿ, ಪಶ್ಚಿಮ ಕಡೆಯಲ್ಲಿದ್ದವರಿಗೆ ಬ
ಹಳ ಬಲವಿದ್ದಾಗ್ಯೂ ಪೂರ್ವ ಕಡೆ ಇದ್ದವರನ್ನು ಸ್ವಲ್ಪ ನಾಶ
ಮಾಡಿ ಹಿಂದು ಜನರಲ್ಲಿ ತಮ್ಮ ಅಧಿಕಾರ ಸ್ಥಾಪಿಸಿದರಿಂದ
ಜಾತಿಯ ಭೇದವು ಪೂರ್ಣವಾಗಿ ಸ್ಥಾಪಿಸಲ್ಪಟ್ಟಿತು; ಮತ್ತು
ಬ್ರಾಹ್ಮಣರ ಕೈಕೆಳಗಿದ್ದ ಎಲ್ಲಾ ಜಾತಿಯವರಿಗೆ ತಕ್ಕ ಮ

ರ್ಯಾದೆ ದೊರಕಿತು. ಆರ್ಯರು ಎಲ್ಲೆಲ್ಲಿ ಹಬ್ಬಿದರೋ, ಅ
ಲ್ಲಲ್ಲಿ ತಮ್ಮ ಪಿತೃಗಳ ಸಂಗೀತಗಳನ್ನೂ ಪೂರ್ವಿಕರಿಂದ ಪಾ
ರಂಪರ್ಯವಾಗಿ ಬಂದ ಆಚರಣೆಗಳನ್ನೂ ಉಪಯೋಗಿಸಿದ
ರು. ಕಡೆಯಲ್ಲಿ ಅವು ಕ್ರಿಸ್ತಶಕದ 1400 ವರುಷಗಳಿಗೆ ಮುಂಚೆ
ಈಗ ಋಗ್ವೇದವೆಂದು ಕರಿಯಲ್ಪಡುವ ಗ್ರಂಥದಲ್ಲಿ ಶೇರಿಸ
ಲ್ಪಟ್ಟವು. ತರುವಾಯ ಮಿಕ್ಕಾದ ಮೂರು ವೇದಗಳಲ್ಲಿರುವ
ಆಚರಣೆಗೆ ಸಂಬಂಧವಾದ ಗೀತಗಳೂ ವೇದವ್ಯಾಖ್ಯಾನಿಗ
ಳ ವಿವರಣೆಗಳೂ ಅಭಿಪ್ರಾಯಗಳೂ ಉಂಟಾದವು. ಇ
ವುಗಳೆಲ್ಲಾ ಒಂದು ಸಂತತಿಯಿಂದ ಇನ್ನೊಂದು ಸಂತತಿಗೆ ಪಾ
ರಂಪರ್ಯವಾಗಿ ಬಂತು. ಈ ಶಾಸ್ತ್ರಗಳೆಲ್ಲ ಬ್ರಾಹ್ಮಣರಲ್ಲಿ
ಮಾತ್ರ ಇದ್ದ ಕಾರಣ, ಅವರು ಜನರಿಂದ ಸನ್ಮಾನಿಸಲ್ಪಡುವ
ದಕ್ಕೆ ಹೇತುವೆಯಾಯಿತು. ವೇದದ ದೇವರುಗಳನ್ನು ಅನು
ಸರಿಸಿ, ದೇವಾರಾಧನೆಯ ರೀತಿಯನ್ನು ಕಾಪಾಡಿ ಕೊಂಡಿ
ದ್ದಾಗ್ಯೂ, ದೇಶದ ಜನರೆಲ್ಲರು ಮುಂಚೆಗಿಂತ ಹೆಚ್ಚಾಗಿ ಜ್ಞಾನ
ಶಾಸ್ತ್ರದ ಯೋಚನೆಗೆ ಬಹಳವಾಗಿ ಸ್ಥಳ ಕೊಟ್ಟರು. ಆದ
ದರಿಂದ ಜನರು ಬೇರೆ ಬೇರೆ ಮತಗಳನ್ನು ಸ್ಥಾಪಿಸಿದರು. ಅ
ವುಗಳಲ್ಲಿ ಸಾಂಖ್ಯ ಮತವು ಮೊದಲನೇದಾಗಿರ ಬಹುದು. ಅ
ದೇ ಪ್ರಕಾರ ಬೇರೆ ಬೇರೆ ಬೋಧನೆಗಳು ಸಹ ಉಂಟಾಗು

ವದಕ್ಕೆ ಆಸ್ಪದವಾಯಿತು. ಈ ಮತದ ಬೋಧನೆಗೂ ವೇದದ ಬೋಧನೆಗೂ ವ್ಯತ್ಯಾಸ ಉಂಟು. ಆದದರಿಂದ ವೇದಾಂತದ ಬೋಧನೆಯು ಇದಕ್ಕೆ ವಿರೋಧವಾದ ಪ್ರತ್ಯುತ್ತರವಾಗಿ ಬರಿಯಲ್ಪಟ್ಟ ಹಾಗೆ ಕಾಣುತ್ತದೆ.

ಬೌದ್ಧ ಮತದಲ್ಲಿ ಹೊಸ ಬೋಧನೆಗಳು ಬಲವಾಗಿ ಬೆಳದದರಿಂದ, ಬ್ರಾಹ್ಮಣರ ಅಹಂಕಾರವನ್ನು ಮುರಿಯುವ ಹಾಗೆ ಬೌದ್ಧರು ಎದುರು ನಿಂತರು. ಬ್ರಾಹ್ಮಣರು ಕ್ಷತ್ರಿಯರನ್ನು ಜೈಸಿ, ಕೀಳ ಜಾತಿಯವರು ವೇದವನ್ನು ಓದ ಬಾರದೆಂದು ಅವರಿಗೆ ವಿರೋಧವಾಗಿ ಕ್ರೂರ ವಿಧಿಗಳನ್ನು ನೇಮಿಸಿದರು. ಆದ ಕಾರಣ ಬೌದ್ಧರು ಇದಕ್ಕೆ ಎದುರು ನಿಲ್ಲ ಬೇಕಾಯಿತು. ಈ ಬೌದ್ಧ ಮತವನ್ನು ಗೌತಮ ಮುನಿಯು ಕ್ರಿಸ್ತಜನ್ಮದ ೬೦೦ ವರುಷಕ್ಕೆ ಮುಂಚೆ ಹುಟ್ಟಿಸಿದನು. ಈತನು ಬ್ರಾಹ್ಮಣತ್ವವನ್ನು ಚನ್ನಾಗಿ ಪರಿಶೋಧಿಸಿ, ತಾನೇ ಒಂದು ವೇದವನ್ನು ಕಲ್ಪಿಸಿ, ಎಲ್ಲಾ ಜಾತಿಯವರು ಸನ್ಮಾರ್ಗದಲ್ಲಿ ಸುಲಭವಾಗಿ ನಡೆದು ಮುಕ್ತಿಯನ್ನು ಹೊಂದುವ ಬಗೆಯನ್ನು ಪ್ರಸಿದ್ಧಿ ಮಾಡಿದನು. ಅವನು ಕೀಳ ಜಾತಿಯವರ ಅಜ್ಞಾನವನ್ನು ನೋಡಿ, ಚಿಂತೆ ಪಟ್ಟು, ಅವರು ತನ್ನ ಬೋಧನೆಯನ್ನು ಕೇಳ ಬರುವದಕ್ಕೆ ಧೈರ್ಯ ಕೊಟ್ಟು, ತನ್ನ ಪ್ರಸಂಗವನ್ನು ಅವರು ಸುಲಭ

ವಾಗಿ ಗ್ರಹಿಸುವ ಹಾಗೆ ಸಾಧಾರಣ ಭಾಷೆಯಲ್ಲಿ ಮಾಡಿದನು. ಈ ಪ್ರಕಾರ ಅವನ ಬೋಧನೆಗಳ ವಿಷಯವಾಗಿ ತರ್ಕ ಉಂಟಾಗಿ, ಬ್ರಾಹ್ಮಣರು ತಮ್ಮ ಅಭಿಪ್ರಾಯಗಳನ್ನು ಸ್ಥಾಪಿಸಲಿಕ್ಕೆ ಪ್ರಯತ್ನ ಮಾಡಿದರು; ಆದರೆ ಬೌದ್ಧ ಮತವನ್ನು ವಿಸ್ತರಿಸಿ ಅದರ ಭಕ್ತರು ಬಹಳವಾಗಿ ಹೆಚ್ಚಿದರಿಂದಲೂ, ಮಗಧ ರಾಜ್ಯದ ದೊಡ್ಡ ಅರಸನಾದ ಅಶೋಕನ ಕಾಲದಲ್ಲಿ (ಕ್ರಿಸ್ತನ ಮುಂಚೆ 234) ರಾಜ್ಯದ ಅಧಿಕಾರವು ಅವರಿಗೆ ಬಂದದರಿಂದಲೂ, ಬ್ರಾಹ್ಮಣತ್ವವನ್ನು ಪೂರ್ಣವಾಗಿ ನಿಗ್ರಹಿಸ ಪ್ರಯತ್ನ ಮಾಡಿದರು. ಆದಾಗ್ಯೂ ಅಘೋರವಾದ ಯುದ್ಧಗಳು ಉಭಯ ಪಕ್ಷದವರಿಗೂ ನಡದ ಬಳಿಕ ಬ್ರಾಹ್ಮಣತ್ವ ತಿರುಗಿ ಜಯ ಹೊಂದಿ, ಅನೇಕರು ಅದನ್ನು ಅಂಗೀಕರಿಸಿದರು. ಈ ಕಾಲದಲ್ಲಿ ಪುರಾಣಗಳುಂಟಾಗಿ ಪ್ರಸಿದ್ಧಿ ಆದವು. ಇವುಗಳಲ್ಲಿ ಜನರ ಸಂತೋಷಕ್ಕಾಗಿ ಪೂರ್ವಿಕರ ಕಟ್ಟುಕಥೆಗಳನ್ನು ಜನರ ಗುಣಕ್ಕೆ ಹಿತವಾಗಿದ್ದ ಆರಾಧನೆಯುಂಟಾಗುವ ಹಾಗೆ ದೇವರುಗಳೆಂದು ಮಾಡಿದ ಪ್ರಾಚೀನ ವೀರರ ಚರಿತ್ರೆಗಳನ್ನು ತುಂಬಿಸಿದರು. ಈ ಕಾಲದಿಂದ ಸಾಧಾರಣ ಜನರೆಲ್ಲರು ವಿಗ್ರಹಾರಾಧನೆಯನ್ನು ಅಭ್ಯಂತರವಿಲ್ಲದೆ ನಡಿಸಿದರು. ಬ್ರಾಹ್ಮಣರು ಮಾತ್ರ ತಿಳುವಿಕೆಯುಳ್ಳವರಾದ ಶಾಸ್ತ್ರಪಂಡಿತರಾದರು.

ಗಣ: ಸಾಹೇಬರೇ, ನೀವು ಹಿಂದು ಮತದ ಉತ್ಪತ್ತಿ ಯನ್ನು ಕುರಿತು ಸಂಕ್ಷೇಪವಾಗಿ ಹೇಳಿದ ವೃತ್ತಾಂತವನ್ನು ಚನ್ನಾಗಿ ಕೇಳಿದೆ. ಈ ಮೇಲಿನ ಕಾರ್ಯಗಳನ್ನೆಲ್ಲಾ ನಿಧಾನಿಸಿ ನೋಡಿದರೆ, ಹಿಂದು ಮತವು ಬ್ರಾಹ್ಮಣರ ಕಲ್ಪನೆಯಿಂದ ಉಂಟಾಯಿತೆಂದು ತೋರುತ್ತದೆ, ಸರಿ; ಆದರೆ ಅದರಲ್ಲಿ ಏನಾದರೂ ಒಳ್ಳೇದಿಲ್ಲವೋ?

ಪಾದ್ರಿ: ಅದರಲ್ಲಿ ಒಳ್ಳೆಯವುಗಳು ಸಹಾ ಅವೆ; ಆದರೆ ಆ ಒಳ್ಳೆಯವುಗಳೆಲ್ಲಾ ಪೂರ್ವ ಕಾಲದಲ್ಲಿದ್ದ ಆರ್ಯರ ಪಿತೃಗಳು ಶೀನಾರ ದೇಶದಿಂದ ತಂದ ಬೈಬಲ್ ಪುಸ್ತಕದ ವರ್ತಮಾನದ ಪಾರಂಪರ್ಯಗಳಾಗಿ ಇದ್ದವು. ಅದರೊಳಗೆ ಇರುವ ಕೆಟ್ಟವುಗಳೆಲ್ಲಾ ಆತ್ಮದ ಅಂಧಕಾರದಲ್ಲಿದ್ದ ಕಾಲಗಳ ಫಲವಾಗಿ ಇದ್ದವು. ಇಂಥಾ ಅಂಧಕಾರದ ಕಾಲಗಳಲ್ಲಿ ಹಿಂದು ಜನರು ಬೇರೆ ಯಾವ ಸಹಾಯವಿಲ್ಲದೆ, ದೇವರನ್ನು ತಡವಿ ಕಂಡುಕೊಳ್ಳುವ ಹಾಗೆ ಪ್ರಯತ್ನ ಮಾಡಿದರು.

ಹಿಂದು ಜನರ ಮತದ ಮುಖ್ಯ ಬೋಧನೆಯಾದ ಜಾತಿಭೇದವು ಜಯದ ಫಲವೆಂದು ತೋರುತ್ತದೆ. ಹ್ಯಾಗೆಂದರೆ "ದೇವರು ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳನ್ನು ಉಂಟು ಮಾಡಿದ್ದಾನೆ." ಆದರೆ ಬ್ರಾಹ್ಮಣರು ತ

ಮ್ಮನ್ನು ಹೆಚ್ಚಿಸಿ ಕೊಳ್ಳುವದಕ್ಕೋಸ್ಕರ ಮಿಕ್ಕಾದವರನ್ನು ಮೊದಲು ಜೈಸಿ, ಆ ಮೇಲೆ ಅವರನ್ನು ತಮ್ಮ ಪಾದಗಳ ಕೆಳಗಿಟ್ಟು ಹೀನೈಸಿದರು.

ಹಿಂದು ಮತವು ತನ್ನನ್ನು ನಾಶ ಮಾಡುವಂಥಾ ಬೀಜವನ್ನು ತನ್ನಲ್ಲಿಟ್ಟು ಕೊಂಡಿದೆ. ಹ್ಯಾಗೆಂದರೆ:—

ಹಿಂದು ಮತಕ್ಕೆ ಸರಿಯಾಗಿ ನಡಿಯ ಬೇಕಾಗಿದ್ದರೆ, ಜಾತಿಯ ನಿಯಮಗಳನ್ನು ಅನುಸರಿಸಿ ನಡಿಯ ಬೇಕು. ಈ ಹಿಂದು ದೇಶದಲ್ಲಿರುವ ಜಾತಿಭೇದವು ಬೇರೆ ಯಾವ ದೇಶಗಳಲ್ಲಿಯೂ ಇಲ್ಲ. ಆದದರಿಂದ ಹಿಂದು ದೇಶ ಬಿಟ್ಟವನು ಹಿಂದು ಆಗಿ ತಿರುಗಿ ತನ್ನ ದೇಶಕ್ಕೆ ಬರುವದು ಅಸಾಧ್ಯವಾಗಿದೆ. ಹಿಂದು ಪ್ರಮಾಣಗಳ ಪ್ರಕಾರ ಈ ದೇಶದಲ್ಲಿಯೂ ಜಾತಿಯನ್ನು ಕಾಪಾಡುವದು ಪ್ರಯಾಸವಾಗಿದೆ; ಯಾಕಂದರೆ ಬೇರೆ ದೇಶಸ್ಥರ ಸಂಗಡ ಈಗ ಬ್ರಾಹ್ಮಣ ಇತ್ಯಾದಿ ಜಾತಿಯವರು ಮಾಡುವ ಬಳಿಕೆಗಳು ಜಾತಿಯ ಪರಿಶುದ್ಧತ್ವವನ್ನು ಆಗಲೇ ಕೆಡಿಸಿ ಬಿಟ್ಟವೆ. ಮತ್ತು ಎಲ್ಲರಿಗೂ ಎಲ್ಲೆಲ್ಲಿಯೂ ಹೊಂದದೆ ಇರುವಂಥಾ ಮತವು ಪಕ್ಷಪಾತವಿಲ್ಲದ ತಂದೆಯಾದ ಪರಾತ್ಪರ ದೇವರಿಂದ ಬಂದಿರ ಕೂಡದೆಂದು ತಿಳುಕೊಳ್ಳ ಬಹುದು.

ಗಣ: ಸಾಹೇಬರೇ, ನೀವು ಈ ವರೆಗೆ ಹೇಳಿದ ವೃತ್ತಾಂತಗಳನ್ನೆಲ್ಲಾ ಚನ್ನಾಗಿ ಗ್ರಹಿಸಿ ಕೊಂಡೆ. ಈ ವೃತ್ತಾಂತವು ನಾನು ಓದಿದ ಹಿಂದು ಶಾಸ್ತ್ರದ ವೃತ್ತಾಂತಕ್ಕೆ ಬಹಳವಾಗಿ ಒಪ್ಪುತ್ತದೆ. ಬ್ರಾಹ್ಮಣರು ಉತ್ತರ ಕಡೆಯಿಂದ ಬಂದರೆಂಬುವದು ಖರೆ. ಈಗ ನನಗೆ ಹಿಂದು ಮತದ ವಿಷಯದಲ್ಲಿ ಸಂಶಯ ಉಂಟು; ಆದ ಕಾರಣ ಪಕ್ಷಪಾತವಿಲ್ಲದ ನಿಜದೇವರು ಯಾರು? ಮತ್ತು ಆತನಿಂದ ಬಂದ ಮತವು ಯಾವದು? ಎಂಬದಾಗಿ ನನಗೆ ದಯ ಮಾಡಿ ಹೇಳಿರಿ.

ಪಾದ್ರಿ: ಒಳ್ಳೇದು ನಿಮಗೆ ನನ್ನ ಮಾತಿನ ಮೇಲೆ ಭರವಸವಿದ್ದರೆ, ನಾನು ತಿಳು ಕೊಂಡ ಸತ್ಯ ವಾಕ್ಯದ ಪ್ರಕಾರ ನಿಮಗೆ ಹೇಳುವೆನು. ಈಗ ಕೇಳಿರಿ: ದೇವರು ಒಬ್ಬನೆ; ಆತನು ಸರ್ವಶಕ್ತನೂ ಸರ್ವವ್ಯಾಪಿಯೂ ಸರ್ವಜ್ಞಾನಿಯೂ ದಯಾಳೂ ಪರಿಶುದ್ಧನೂ ಆಗಿ ಇದ್ಧಾನೆಂಬುವದು ನೀವೆಲ್ಲರು ಒಪ್ಪಿ ಕೊಳ್ಳುತ್ತೀರಿ. ಇಂಥಾ ಉತ್ತಮನಾದ ದೇವರು ಸರ್ವರನ್ನು ನಿರ್ಮಿಸಿ, ಕಾಪಾಡಿ, ಪರಿಪಾಲನೆ ಮಾಡುತ್ತಾನೆ. ಆತನು ದಯಾಪರನಾಗಿರುವದರಿಂದ ಈ ಪಾಪಸಮುದ್ರದಲ್ಲಿ ಮುಳುಗಿ ಹೋದ ಸಮಸ್ತ ಮನುಷ್ಯರನ್ನು ಪಾಪವಿಮೋಚನೆ ಮಾಡಿ, ರಕ್ಷಿಸುವದಕ್ಕೆ ಇಛ್ಛೈಸುತ್ತಾನೆ.

ಹೀಗೆ ಪಾಪಿಷ್ಠರ ರಕ್ಷಣೆಗೋಸ್ಕರ ತಾನೇ ಮನುಷ್ಯಾವ
ತಾರವನ್ನು ತಾಳಿ, ಈ ಲೋಕಕ್ಕೆ ಬಂದನು. ಆದರೆ ಹಿಂ
ದು ಜನರು ಹೇಳುವ ಹಾಗೆ ಆತನು ಮತ್ಸ್ಯ ವರಾಹ ನ
ರಶಿಂಹ ಇತ್ಯಾದಿ ಮೃಗಗಳ ರೂಪವನ್ನು ಧರಿಸಿ ಬರಲಿ
ಲ್ಲ. ಮನುಷ್ಯರನ್ನು ರಕ್ಷಿಸುವದಕ್ಕೆ ಆತನು ಮನುಷ್ಯನಾ
ಗಿಯೇ ಬರ ಬೇಕಾಗಿತ್ತು. ಆದ ಕಾರಣ ಆತನು ಮನು
ಷ್ಯನ ಅವತಾರವನ್ನು ಧರಿಸಿ, ಪಾಪಿಷ್ಠರ ಜಾಮೀನದಾ
ರನಾಗಿ, ಅವರ ಪಾಪವನ್ನು ತಾನು ಹೊತ್ತು ಕೊಂಡು, ಬ
ಹಳ ಶ್ರಮೆ ಪಟ್ಟು, ಕಡೆಗೆ ತಾನೇ ಅವರಿಗೋಸ್ಕರ ತನ್ನ ಪ್ರಾಣ
ವನ್ನು ಕ್ರೂಜೆಯ ಮೇಲೆ ಅರ್ಪಿಸಿದನು. ಯಾಕಂದರೆ ಎಲ್ಲಾ
ಮನುಷ್ಯರು ಪಾಪದಲ್ಲಿ ಬಿದ್ದು ಪಾಪದ ಕ್ರಿಯೆಗಳನ್ನು ನಡಿ
ಸಿ, ನರಕಕ್ಕೆ ಗುರಿಯಾದರು. ಆ ನರಕದ ಬಾಧೆಯನ್ನು ಪರಿ
ಹರಿಸ ಬೇಕಾದರೆ, ಈ ಅವತಾರ ತಾಳಿದ ಯೇಸು ಕ್ರಿಸ್ತನು
ದೇವರ ಪರಿಶುದ್ಧ ನ್ಯಾಯಪ್ರಮಾಣಕ್ಕೆ ಒಳಗಾದನು; ಹ್ಯಾ
ಗಂದರೆ, ಆ ನ್ಯಾಯಪ್ರಮಾಣವೆಲ್ಲಾ ಆತನು ತಾನೇ ಪೂರೈಸ
ಲೂ ನಿಯಮದ ಶಾಪವನ್ನು ಅನುಭವಿಸಲೂ ಬೇಕಾಯಿತು.
ಆತನು ಅವತಾರ ತಾಳಿದ ಈ ಲೋಕದಲ್ಲಿ ಮೂವತ್ತುಮೂ
ರು ವರುಷವಿದ್ದು, ಹನ್ನೆರಡು ಶಿಷ್ಯರನ್ನು ಮಾಡಿ ಕೊಂಡು,

ಊರೂರಿಗೆ ಹೋಗಿ, ಬಡವರಿಗೂ ಐಶ್ವರ್ಯವಂತರಿಗೂ ಏಕ ಪ್ರಕಾರ ನೀತಿಬೋಧನೆಯನ್ನು ಬೋಧಿಸಿ, ಕುರುಡರಿಗೆ ದೃಷ್ಟಿ ಕೊಟ್ಟು, ಕುಂಟರನ್ನು ನಡಿಯ ಮಾಡಿ, ಸತ್ತವರಿಗೆ ಜೀವ ಕೊಟ್ಟು, ರೋಗಿಷ್ಠರಿಗೆ ಸ್ವಸ್ಥ ಮಾಡಿ, ಈ ಪ್ರಕಾರ ನಾನಾ ಅದ್ಭುತ ಕಾರ್ಯಗಳನ್ನು ನಡಿಸಿ, ಕಷ್ಟ ಪಡುವ ಬಡವರಿಗೆ ಬಹಳ ಉಪಕಾರಗಳನ್ನು ಮಾಡುತ್ತಿದ್ದನು. ಇಂಥಾ ದಿವ್ಯ ಅವತಾರಕ್ಕೆ ಸದ್ಗುರು ಎಂದು ಹೇಳ ಬೇಕು. ಆತನ ನಡೆಯೂ ನುಡಿಯೂ ಪರಿಶುದ್ಧವಾಗಿಯೂ ಕೃಪೆಯುಳ್ಳದ್ದಾಗಿಯೂ ಇದ್ದವು. ಪಾಪಿಷ್ಠರು ತಮ್ಮ ಪಾಪಕ್ಕೆ ಸತ್ಯ ಪಶ್ಚಾತ್ತಾಪ ಪಟ್ಟು ಆತನಲ್ಲಿ ವಿಶ್ವಾಸವಿಟ್ಟವರಿಗೆ ಆತನು ಪಾಪ ಪರಿಹಾರವನ್ನು ಕೊಟ್ಟು ರಕ್ಷಿಸುತ್ತಾನೆ; ಮತ್ತು ಪರಲೋಕದಲ್ಲಿ ನಿತ್ಯ ಸುಖ ನಿತ್ಯಾನಂದವನ್ನು ಕೊಡುತ್ತಾನೆ.

ಗಣಿ: ಯೇಸು ಕ್ರಿಸ್ತನು ಅವತಾರವನ್ನು ಧರಿಸಿ ಈ ಲೋಕಕ್ಕೆ ಬಂದು ಪಾಪಿಷ್ಠರನ್ನು ರಕ್ಷಿಸುವನೆಂದು ಕಾಲಜ್ಞಾನದ ವಾಕ್ಯಗಳಿಂದ ದೃಷ್ಟಾಂತ ಕೊಡ ಬಹುದೋ?

ಪಾದ್ರಿ: ಹೌದು, ಸಂತೋಷದಿಂದಲೂ ಧೈರ್ಯದಿಂದಲೂ ದೃಷ್ಟಾಂತ ಕೊಡ ಬಹುದು. ನಮ್ಮ ಬೈಬಿಲ್ ಎಂಬ ದೇವವಾಕ್ಯವು ಎರಡು ಭಾಗವಾಗಿ ವಿಭಾಗಿಸಲ್ಪಟ್ಟದೆ. ಅವು ಹಳೆ

ಒಡಂಬಡಿಕೆ, ಹೊಸ ಒಡಂಬಡಿಕೆ ಎಂಬವುಗಳು. ಹಳೆ ಒ
ಡಂಬಡಿಕೆಯಲ್ಲಿ ಆತನ ವಿಷಯವಾದ ಅನೇಕ ವಾಕ್ಯಗಳು
ಇರುತ್ತವೆ; ಮತ್ತು ಆ ವಾಕ್ಯಗಳ ಪ್ರಕಾರವೇ ಯೇಸು ಕ್ರಿಸ್ತ
ನಿಗೆ ಸಂಭವಿಸಿತು ಎಂದು ಹೊಸ ಒಂಡಬಡಿಕೆಯಲ್ಲಿ ಮತ್ತಾ
ಯನೂ ಲೂಕನೂ ಬರದ ಸುವಾರ್ತೆಗಳಲ್ಲಿ ಸ್ಪಷ್ಟವಾಗಿ ನೋ
ಡ ಬಹುದು. ಯೇಸು ಕ್ರಿಸ್ತನು ಹುಟ್ಟುವ ೭೫೮ ವರುಷದ
ಮುಂಚೆ ಯೆಶಾಯನೆಂಬ ಮಹಾತ್ಮನು ಯೇಸು ಕ್ರಿಸ್ತನ ಜ
ನ್ಮದ ವಿಷಯವಾಗಿ ಪ್ರವಾದಿಸಿದ ವಾಕ್ಯವನ್ನು ಕೇಳಿರಿ: "ಇ
ಗೋ ಕನ್ಯಾಸ್ತ್ರೀ ಬಸುರಾಗಿ, ಮಗನನ್ನು ಹೆತ್ತು, ಅವನಿಗೆ
ಇಮ್ಮಾನುವೇಲನೆಂದು ಹೆಸರಿಡುವಳು." (ಯೆಶಾ. ೭, ೧೪.)
ಈ ವಾಕ್ಯದ ಪ್ರಕಾರ ಯೇಸು ಕ್ರಿಸ್ತನು ಒಬ್ಬ ಮರಿಯಳೆಂಬ
ಕನ್ಯೆಯ ಉದರದಲ್ಲಿ ಜನ್ಮಿಸಿದನು; ಇದನ್ನು ಮತ್ತಾಯನ
ಸುವಾರ್ತೆಯ ಮೊದಲನೇ ಸಂಧಿಯ ೧೮ನೇ ವಚನದಿಂದ
ಲೂ ಲೂಕನ ಮೊದಲನೇ ಸಂಧಿ ೨೬ನೇದಿಂದ ೫೫ನೇ ವರೆ
ಗೆ ಓದಿ ನೋಡ ಬಹುದು. ಈಗ ನಾನು ಇದರ ಕೆಳಗೆ ಕೆಲ
ವು ಕಾಲಜ್ಞಾನದ ವಚನಗಳನ್ನು ತೋರಿಸುತ್ತೇನೆ; ಅವುಗಳ
ನ್ನು ನೀವು ಓದಿ ನಿಧಾನವಾಗಿ ಆಲೋಚನೆ ಮಾಡಿದರೆ, ಸತ್ಯ
ವು ನಿಮ್ಮ ಮನಸ್ಸಿನೊಳಗೆ ಪ್ರಜ್ವಲಿಸುವದು.

ಸ್ತ್ರೀಬೀಜವೆಂಬ ಯೇಸು ಕ್ರಿಸ್ತನು ರಕ್ಷಕನಾಗಿ ಸೈತಾನ
ನ ರಾಜ್ಯ ನಾಶ ಮಾಡುವನೆಂಬ ಅರ್ಥವುಳ್ಳ ವಚನವು ಉತ್ಪ
ತ್ತಿ. ೩, ೧೫ ರಲ್ಲಿ ಬರದದೆ.—"ಮತ್ತು ನಿನಗೂ ಸ್ತ್ರೀಗೂ, ನಿ
ನ್ನ ಬೀಜಕ್ಕೂ ಸ್ತ್ರೀಯ ಬೀಜಕ್ಕೂ ಹಗೆ ಇಡುವೆನು; ಅವನು
ನಿನ್ನ ತಲೆಯನ್ನು ಬಡಿಯುವನು, ಆದರೆ ನೀನು ಅವನ ಹಿಮ್ಮ
ಡಿಯನ್ನು ಬಡಿಯುವಿ."

ಯೇಸು ಕ್ರಿಸ್ತನು ದೇವರ ಭಕ್ತನಾದ ಅಬ್ರಹಾಮನ
ವಂಶದಲ್ಲಿ ಹುಟ್ಟ ಬೇಕೆಂಬ ವಚನವು ಉತ್ಪತ್ತಿ .೨೨, ೧೮.—
"ನೀನು ನನ್ನ ಶಬ್ದವನ್ನು ಕೇಳಿದ್ದರಿಂದ, ಭೂಮಿಯ ಜನಾಂ
ಗಗಳೆಲ್ಲಾ ನಿನ್ನ ಬೀಜದಿಂದ ಆಶಿರ್ವದಿಸಲ್ಪಡುವವು ಎಂದು,
ನನ್ನ ಮೇಲೆ ಆಣೆ ಇಟ್ಟು ಕೊಂಡಿದ್ಧೇನೆಂಬದಾಗಿ ಯೆಹೋ
ವನು ಹೇಳಿದ್ಧಾನೆ."

ಆತನು ಯೂದನ ಗೋತ್ರದಲ್ಲಿ ಹುಟ್ಟ ಬೇಕೆಂಬದು ಉ
ತ್ಪತ್ತಿ. ೪೯, ೧೦.—"ದಂಡವು ಯೆಹೂದನಿಂದಲೂ, ಮುದ್ರೆ
ಯ ಕೋಲು ಅವನ ಕಾಲುಗಳ ನಡುವೆಯಿಂದಲೂ, ಶೀ
ಲೋ ಬರುವ ಪರ್ಯಂತರ, ತೊಲಗದು."

ಆತನು ದಾವೀದನೆಂಬ ಭಕ್ತನಾದ ಅರಸನ ವಂಶದ
ಲ್ಲಿ ಹುಟ್ಟ ಬೇಕೆಂಬದು ಯೆಶಾ. ೧೧, ೧೦; ಯೆರೆಮಿ.

೨೨, ೫. ೬.—"ಆ ದಿವಸದಲ್ಲಿ ಆಗುವದೇನಂದರೆ: ಇಶಾ ಯನ ಬೇರು ಜನರಿಗೆ ಧ್ವಜವಾಗಿ ನಿಲ್ಲುವನು; ಜನಾಂಗಗಳು ಅವನ ಬಳಿಗೆ ಹುಡುಕಿ ಬರುವರು; ಅವನ ವಿಶ್ರಾಂತಿ ಮಹಿಮೆ ಯಾಗಿರುವದು."

ಆತನು ಬೇತ್ಲೆಹೇಮ ಪಟ್ಣದಲ್ಲಿ ಹುಟ್ಟ ಬೇಕೆಂಬದು ಮಿಾ ಕ. ೫, ೨.—"ಆದರೆ ಎಫ್ರಾತದ ಬೇತ್ಲೆಹೇಮೇ, ನೀನು ಯೆ ಹೂದದ ಸಾವಿರಗಳಲ್ಲಿ ಸಣ್ಣದಾಗಿದ್ದರೂ, ಇಸ್ರಯೇಲಿನಲ್ಲಿ ಧೊರೆತನ ಮಾಡ ತಕ್ಕವನು, ನಿನ್ನಿಂದ ನನಗೆ ಹೊರಡುವನು; ಅವನ ಹೊರಡೋಣಗಳು ಪೂರ್ವದಿಂದಲೂ ಅನಾದಿ ದಿ ವಸಗಳಿಂದಲೂ ಅವೆ."

ಆತನು ಕನ್ಯೆಯ ಉದರದಲ್ಲಿ ಹುಟ್ಟ ಬೇಕೆಂಬದು, ನಾ ನು ಸ್ವಲ್ಪ ಮುಂಚೆ ಹೇಳಿದಂಥ ಯೆಶಾ. ೭, ೧೪.—"ಆ ದದರಿಂದ ಯೆಹೋವನು ತಾನೇ ನಿಮಗೆ ಗುರುತು ಕೊಡು ವನು; ಇಗೋ ಕನ್ಯಾಸ್ತ್ರೀ ಬಸುರಾಗಿ, ಮಗುವನ್ನು ಹೆತ್ತು, ಅವನಿಗೆ ಇಮ್ಮಾನುವೇಲನೆಂದು, ಹೆಸರಿಡುವಳು."

ಆತನು ತನ್ನ ಸ್ವದೇಶಸ್ಥರಿಂದ ತಿರಸ್ಕರಿಸಲ್ಪಡುವನೆಂಬದು ಯೆಶಾ. ೫೩, ೨. ೩.—"ಅವನು ಕುಡಿಯಂತೆಯೂ ಒ ಣಗಿದ ಭೂಮಿಯಿಂದ ಹುಟ್ಟುವ ಬೇರಿನಂತೆಯೂ ಅವನ

ಮುಂದೆ ಬೆಳಿಯುವನು; ನಾವು ನೋಡ ತಕ್ಕ ಆಕಾರವೂ ಪ್ರಭೆಯೂ ಅವನಲ್ಲಿ ಇಲ್ಲ; ನಾವು ಅವನನ್ನು ಅಪೇಕ್ಷಿಸುವ ಹಾಗೆ ಅವನಲ್ಲಿ ರೂಪವು ಇಲ್ಲ; ಅವನು ಮನುಷ್ಯರಿಂದ ತಿರಸ್ಕರಿಸಲ್ಪಟ್ಟವನೂ ತಳ್ಳಲ್ಪಟ್ಟವನೂ ವ್ಯಸನಗಳುಳ್ಳ ಮನುಷ್ಯನೂ ಕಷ್ಟ ತಿಳಿದವನೂ: ಮತ್ತು ನಾವು ಅವನಲ್ಲಿ ಲಕ್ಷ್ಯವಿಡಲಿಲ್ಲ."

ಆತನು ಹೊಡೆಯಲ್ಪಟ್ಟು, ಅಪಹಾಸ್ಯ ಮಾಡಲ್ಪಟ್ಟು ಉಗುಳಲ್ಪಡುವನು ಎಂಬದು ಯೆಶಾ. ೫೦, ೬.—"ನನ್ನ ಬೆನ್ನನ್ನು ಹೊಡೆಯುವವರಿಗೂ ನನ್ನ ಕೆನ್ನೆಗಳನ್ನು ಕೂದಲು ಕೀಳುವವರಿಗೂ ಕೊಟ್ಟೆನು; ನನ್ನ ಮುಖವನ್ನು ನಿಂದೆಗೂ ಉಗುಳಿಗೂ ಅಡಗಿಸಲಿಲ್ಲ."

ಆತನ ಕೈಗಳೂ ಪಾದಗಳೂ ತಿವಿಯಲ್ಪಡುವವು ಎಂಬದು ಕೀರ್ತ. ೨೨, ೧೬. ೧೮.—"ಯಾಕಂದರೆ ನಾಯಿಗಳು ನನ್ನನ್ನು ಸುತ್ತಿ ಕೊಂಡವೆ; ದುರ್ಮಾರ್ಗರ ಸಭೆಯು ನನ್ನನ್ನು ಮುತ್ತಿ ಕೊಂಡದೆ; ನನ್ನ ಕೈಗಳನ್ನೂ ಕಾಲುಗಳನ್ನೂ ತಿವಿದರು; ನನ್ನ ವಸ್ತ್ರಗಳನ್ನು ತಮ್ಮಲ್ಲಿ ಪಾಲಿಡುತ್ತಾರೆ; ನನ್ನ ಅಂಗಿಗೋಸ್ಕರ ಚೀಟು ಹಾಕುತ್ತಾರೆ."

ಆತನು ಕ್ರೂರವಾದ ಮರಣ ಹೊಂದುವನೆಂಬದು ಯೆ

ಶಾ. ೫೩, ೮—೧೦.—“ಅವನ ಸಂತತಿಯನ್ನು ಯಾರು ವಿವರಿಸುವರು? ಯಾಕಂದರೆ ಜೀವಿತರ ದೇಶದಿಂದ ಕಡಿಯಲ್ಪಟ್ಟನು; ತನ್ನ ಜನರ ದ್ರೋಹಕ್ಕಾಗಿ ಅವನಿಗೆ ಬಾಧೆಯಾಯಿತು; ಮತ್ತು ಅವನ ಸಮಾಧಿ ದುಷ್ಟರ ಸಂಗಡ ನೇಮಿಸಲ್ಪಟ್ಟಿತು; ಆದರೆ ಅವನ ಮರಣದಲ್ಲಿ ಐಶ್ವರ್ಯವಂತನ ಸಂಗಡ ಇದ್ದನು; ಯಾಕಂದರೆ ಅವನು ಬಲಾತ್ಕಾರ ಮಾಡಲಿಲ್ಲ, ಅವನ ಬಾಯಿಯಲ್ಲಿ ಮೋಸವಿರಲಿಲ್ಲ. ಆದಾಗ್ಯೂ ಯೆಹೋವನು ಅವನನ್ನು ಜಜ್ಜ ಸಂತೋಷ ಪಟ್ಟನು, ಅವನನ್ನು ದುಃಖ ಪಡಿಸಿದನು.”

ಆದಾಗ್ಯೂ ಆತನು ಕೊಳೆಯನ್ನು ನೋಡನು; ಸಮಾಧಿಯಲ್ಲಿ ಬಿಡಲ್ಪಡನು ಎಂಬದು ಕೀರ್ತ. ೧೬, ೧೦.—“ಯಾಕಂದರೆ, ನೀನು ನನ್ನ ಪ್ರಾಣವನ್ನು ಪಾತಾಳದಲ್ಲಿ ಬಿಟ್ಟುಬಿಡುವದಿಲ್ಲ; ನಿನ್ನ ಭಕ್ತನನ್ನು ಕೊಳೆಯುವಿಕೆಯನ್ನು ನೋಡ ಗೊಡಿಸುವದಿಲ್ಲ.”

ಈ ಪ್ರಕಾರ ಯೇಸು ಕ್ರಿಸ್ತನ ವಿಷಯದಲ್ಲಿ ಇನ್ನು ಅನೇಕ ಪ್ರವಾದನೆಗಳುಂಟು; ಅವೆಲ್ಲಾ ಹೇಳಿ ಪೂರೈಸ ಕೂಡದು. ಆದದರಿಂದ ನೀವು ಯೇಸುವಿನ ಶಿಷ್ಯರಾದ ಮತ್ತಾಯನೂ ಲೂಕನೂ ಬರದ ಸುವಾರ್ತೆಗಳನ್ನು ಚನ್ನಾಗಿ ಓದಿ

ಶೋಧಿಸಿದರೆ, ನಿಮಗೆ ಇನ್ನು ಎಥೇಷ್ಟ ದೃಷ್ಟಾಂತ ಶಿಕ್ಕು
ವದು.

ಗಣ: ನೀವು ತೋರಿಸಿದ ಸುವಾರ್ತೆ ಪುಸ್ತಕಗಳನ್ನು
ಓದಿ ನೋಡಿದೆ; ಯೇಸು ಕ್ರಿಸ್ತನ ಬೋಧನೆಯನ್ನು ಗ್ರಹಿಸಿ,
ಮನೋತೃಪ್ತಿ ಪಟ್ಟೆನು; ಆದರೆ ಆತನು ಮನುಷ್ಯರ ಪಾಪ
ಕ್ಕಾಗಿ ಸಾಯ ಬೇಕೆಂಬುವದು ನಾನು ಗ್ರಹಿಸ ಕೂಡದು.

ಪಾದ್ರಿ: ಖರೆ, ಖರೆ, ನಿಜವಾಗಿ ಹೇಳಿದ್ದೀರಿ. ಅದು ನಾ
ನು ಸಹ ಗ್ರಹಿಸ ಕೂಡದು, ಅಂದರೆ ನಾವು ಅಲ್ಪ ಜೀವಿಗ
ಳಾದ ಮನುಷ್ಯರು ಸರ್ವಜ್ಞಾನಿಯಾದ ದೇವರ ಮರ್ಮ
ಗಳೆಲ್ಲಾ ಗ್ರಹಿಸ ಕೂಡದೆಂಬುವದು ಸರ್ವರು ಒಪ್ಪಿ ಕೊಳ್ಳು
ತ್ತಾರೆ. ಆದಾಗ್ಯೂ ದಯಾಪರನಾದ ದೇವರು ಪಾಪಿಷ್ಠರಾ.
ದ ಮನುಷ್ಯರು ತಮ್ಮ ಪಾಪಗಳನ್ನು ಪರಿಹರಿಸಿ ಕೊಳ್ಳ ಶ
ಕ್ತಿ ಇಲ್ಲದವರಾಗಿದ್ದದರಿಂದ, ದೇವರು ತಾನೇ ಮನುಷ್ಯ ಅ
ವತಾರವನ್ನು ಧರಿಸಿ ಕೊಂಡು, ತಾನು ಧರಿಸಿ ಕೊಂಡ ಮ
ನುಷ್ಯತ್ವವನ್ನು ಮರಣಪಾತ್ರ ಮಾಡಿ ಕೊಂಡು, ಈ ರೀತಿಯಿಂ
ದ ನಮ್ಮನ್ನು ರಕ್ಷಿಸುವದಕ್ಕೆ ಉಪಾಯ ಮಾಡುವದು ಆತ
ನ ಚಿತ್ತವಾಯಿತೆಂದು ಸಾವು ನಂಬಿದರೆ, ನಮ್ಮ ಕಲ್ಯಾಣ
ವಾಗುವದು.

ಗಣ: ಆದರೆ ನಮ್ಮ ಸ್ವಧರ್ಮ ಬಿಟ್ಟು ಅನ್ಯ ಧರ್ಮ ವನ್ನು ಅಂಗೀಕರಿಸ ಬಾರದೆಂದು ಭಗವದ್ಗೀತೆಯಲ್ಲಿ ಹೇಳಿದೆ:

ಶ್ರೆಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ
ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್.

ಪಾದ್ರಿ: ಶಾಸ್ತ್ರಿಗಳೇ, ಒಳ್ಳೇ ಶ್ಲೋಕ ಹೇಳಿದಿರಿ. ಇದರಲ್ಲಿ ಒಬ್ಬನು ತನ್ನ ಧರ್ಮವು ಕೆಟ್ಟದಾಗಿದ್ದರೂ ಅದನ್ನು ಬಿಟ್ಟು ಮತ್ತೊಂದು ಧರ್ಮವನ್ನು ಅಂಗೀಕರಿಸ ಬಾರದು ಎಂಬ ಅರ್ಥ ಹೇಳುತ್ತದೆ. ಒಳ್ಳೇದು, ಹಾಗಾದರೆ ದಕ್ಷಿಣ ದೇಶದಲ್ಲಿ ಒಂದು ಕುಲದವರು ಇದ್ದಾರೆ. ಅವರು ಪಾರಂಪರ್ಯವಾಗಿ ನರಹತ್ಯ ಕಳ್ಳತನ ಇತ್ಯಾದಿ ದುಷ್ಟ ವೃತ್ತಿಯಿಂದ ತಮ್ಮ ಜೀವನವನ್ನು ಸಂಪಾದಿಸಿ ಕೊಳ್ಳುವ ಅವರ ಧರ್ಮವುಂಟು. ಇಂಥಾ ಕೆಟ್ಟ ಧರ್ಮವನ್ನು ಅವರು ಬಿಡ ಬಾರದೆಂಬದಾಗಿ ಕಾಣುತ್ತದೆ. ಇಂಥಾ ಶ್ಲೋಕಕ್ಕೆ ಅನುಸಾರವಾಗಿ ನಡಿಯುವದಕ್ಕೆ ಮನಸ್ಸುಳ್ಳವರಾಗಿದ್ಧೀರೋ? ಇದು ಬುದ್ಧಿಯ ಮಾತೋ? ಈ ಭಗವದ್ಗೀತೆ ಯಾವ ಸಮಯದಲ್ಲಿ ಉಂಟಾಯಿತೆಂಬುವದು ನೀವು ಬಲ್ಲಿರಿ. ಕೌರವರಿಗೂ ಪಾಂಡವರಿ

ಗೂ ಯುದ್ಧ ತೊಡಗುವ ಸಮಯದಲ್ಲಿ ಅರ್ಜುನನು ತನ್ನ ದಾಯಾದಿಗಳಾದ ಕೌರವರನ್ನು ನೋಡಿ, ಕರುಣ ಪಟ್ಟು, ಅವರನ್ನು ರಣರಂಗದಲ್ಲಿ ಮಡಿದು ಹಾಕಿ ರಾಜ್ಯವನ್ನಾಳುವದಕ್ಕಿಂತ ಅರಣ್ಯವಾಸ ಮಾಡುವದು ಒಳ್ಳೇದೆಂದು, ತನ್ನ ಧನುಸ್ಸು ಕೆಳಗೆ ಹಾಕಿ ಬಿಟ್ಟನು. ಇದನ್ನು ನೋಡಿ, ಕ್ರಿಷ್ಣನು ಭಯಪಟ್ಟು, ಅರ್ಜುನನು ಹಿಂಜರಿದರೆ ಜಯಪ್ರದವಾಗದೆಂದು ನೆನಸಿ, ಅವನು ತಿರುಗಿ ಧನುಸ್ಸನ್ನು ಎತ್ತಿ ಯುದ್ಧಕ್ಕೆ ನಿಲ್ಲುವ ಹಾಗೆ, ಅವನಿಗೆ ಜ್ಞಾನ ಉಪದೇಶ ಮಾಡಿದ ಈ ಭಗವದ್ಗೀತೆಯ ಬೋಧನೆಯಿಂದ ಪ್ರೇರೇಪಿಸಿದನು. ಆ ಮೇಲೆ ಅರ್ಜುನನು ಯುದ್ಧ ಮಾಡಿ, ಕೌರವರನ್ನು ಧ್ವಂಸ ಮಾಡಿದನು. ಇಂಥಾ ಕ್ರೂರ ಮನಸ್ಸುಂಟು ಮಾಡುವ ಭಗವದ್ಗೀತೆಯ ಬೋಧನೆಯಿಂದ ನೀವು ಏನು ಒಳ್ಳೇದನ್ನು ಕಲಿಯ ಬಹುದು?. ಹೇಳಿರಿ. ಅದರ ಬುಡವೇ ಕೆಟ್ಟು ಹೋಗಿದೆ; ಅದರಲ್ಲಿ ಯಾವ ನೀತಿ ಇರ ಬಹುದು?

ಗಣ: ಈಗ ನಮ್ಮ ಶಾಸ್ತ್ರಗಳಲ್ಲಿ ನನಗೆ ಬಹಳ ಅನುಮಾನ ಹುಟ್ಟುತ್ತದೆ. ಅದು ಮನುಷ್ಯಕಲ್ಪಿತವಾದ ದೆಶೆಯಿಂದ ಬಹಳ ಬಡದಾಟ ಕಡದಾಟ ಉಂಟಾಗಿ, ಹಿಂದು ಮಾರ್ಗವು ಕ್ಷೀಣವಾಗಿ ಬರುತ್ತದೆ; ಮತ್ತು ನಿಮ್ಮ ಮಾರ್ಗವು ವೃದ್ಧಿ

ಯಾಗುತ್ತಾ ಬರುತ್ತದೆ. ಆದ ಕಾರಣ ನಿಮ್ಮ ಮಾರ್ಗವು ದೇವರಿಂದುಂಟಾಯಿತೆಂಬದಾಗಿ ಹೇಳ ಬಹುದು. ಆದರೆ ನಿಮ್ಮ ಶಾಲೆಯಲ್ಲಿ ಬಹಳ ಹುಡುಗರು ವಿದ್ಯಾಭ್ಯಾಸದಿಂದ ಘಟ್ಟಿಗರಾಗಿ, ದೊಡ್ಡ ದೊಡ್ಡ ಉದ್ಯೋಗಗಳನ್ನು ಪ್ರಾಪ್ತಿಸಿ ಕೊಳ್ಳುತ್ತಾರೆ ಹೊರ್ತು, ನಿಮ್ಮ ಧರ್ಮದಲ್ಲಿ ಲಕ್ಷ್ಯವಿಡುವದಿಲ್ಲ. ಇದರ ಕಾರಣವೇನು?

ಪಾದ್ರಿ: ಇದಕ್ಕೆ ಕೆಲವು ಕಾರಣಗಳುಂಟು. ಮುಖ್ಯ ಕಾರಣ ಯಾವದೆಂದರೆ: ಅವರು ತಮ್ಮ ಪಾಪಗಳನ್ನು ತಿಳುಕೊಳ್ಳುವದಿಲ್ಲ. ಅವರಲ್ಲಿ ಪಾಪದ ಪ್ರೀತಿಯೂ ಲೋಕದ ಮನಸ್ಸೂ ಇನ್ನೂ ನೆಲೆಗೊಂಡಿರುವದರಿಂದ, ದೇವರಿಂದ ತೊಲಗಿ ಹೋಗಿ, ರಕ್ಷಣೆಯನ್ನು ಹುಡುಕುವದಿಲ್ಲ. (ಅವರು ತಮ್ಮ ಆತ್ಮರಕ್ಷಣೆಗಾಗಿ ಚಿಂತೆ ಮಾಡದೆ, ಶರೀರಸಂಬಂಧವಾದವುಗಳಿಗೊಸ್ಕರ ಹೆಚ್ಚಾಗಿ ಚಿಂತೆ ಮಾಡುತ್ತಾರೆ.) ಒಬ್ಬನು ತನ್ನ ರೋಗವನ್ನು ತಿಳ ಕೊಳ್ಳದಿದ್ದರೆ, ವೈದ್ಯನನ್ನು ಹುಡುಕಲಾರನು. ಅದೇ ಪ್ರಕಾರ ಒಬ್ಬನು ತನ್ನ ಪಾಪವನ್ನು ತಿಳುಕೊಳ್ಳದಿದ್ದರೆ, ಅವನು ರಕ್ಷಕನನ್ನು ಹುಡುಕಲಾರನು. ಮನುಷ್ಯನ ಸ್ವಭಾವವು ಕೆಟ್ಟದಾಗಿರುವದರಿಂದ, ಅವನಲ್ಲಿ ತಗ್ಗಿಸಿ ಕೊಳ್ಳುವಂಥಾ ಗುಣ ಇರುವದಿಲ್ಲ; ಆದರೆ ಉಬ್ಬಿಸಿ ಕೊಳ್ಳುವಂಥಾದ್ದು

ಹೆಚ್ಚಾಗಿ ಉಂಟು. ಆದದರಿಂದ ಮನುಷ್ಯರು ಪಾಪವನ್ನು ತಿ ಳು ಕೊಂಡು ಪಶ್ಚಾತ್ತಾಪ ಪಡುವದು ಸುಲಭವಾದ ಕಾರ್ಯ ವಲ್ಲ. ದೇವರ ಮಹಿಮೆಗಾಗಿ ಬದುಕ ಇಚ್ಛೈಸುವವರೇ ದೇವ ರ ಚಿತ್ತಾನುಸಾರವಾಗಿ ನಡ ಕೊಳ್ಳುತ್ತಾರೆ. ವಿದ್ಯ ಕಲಿತ ಹಿಂ ದು ಜನರು ಸರಕಾರದಲ್ಲಿ ಉದ್ಯೋಗವನ್ನು ಸಂಪಾದಿಸಿ ಕೊ ಳ್ಳುವದರಿಂದ, ಮತವು ಅಲಕ್ಷ್ಯ ಮಾಡಿ, ದೇವರನ್ನು ಮರೆ ತು ಬಿಡುತ್ತಾರೆ. ಆದರೆ ಎಲ್ಲಾ ವಿದ್ಯಾರ್ಥಿಗಳು ಹೀಗೆಯೇ ಅ ವಿಶ್ವಾಸಿಗಳಾಗಿ ನಡ ಕೊಳ್ಳತ್ತಾರೆಂದು ನೆನಸ ಬೇಡಿರಿ. ದೊಡ್ಡ ಪಟ್ಣಗಳಾದ ಮುಂಬಾಯಿ, ಮದ್ರಾಸ್ ಬಂಗಾಲ್ ಎಂಬ ಈ ಪಟ್ಣಗಳಲ್ಲಿ ಇಂಥಾ ವಿದ್ಯದಲ್ಲಿ ಹಿಂದು ವಿದ್ವಾಂಸರೊಳಗೆ ಬ ಹಳ ಮಂದಿ ಚತುರರು ತಮ್ಮ ಆತ್ಮರಕ್ಷಣೆಯು ಅಮೂಲ್ಯವಾ ದದೆಂದು ತಿಳುಕೊಂಡು, ಯೇಸು ಕ್ರಿಸ್ತನಲ್ಲಿ ವಿಶ್ವಾಸವಿಟ್ಟು, ಕ್ರೈ ಸ್ತಸಭೆಯಲ್ಲಿ ಶೇರಿ, ನನ್ನ ಹಾಗೆಯೇ ಸುವಾರ್ತೆಪ್ರಸಂಗಿಗಳಾ ಗಿ, ಊರೂರು ದೇಶ ದೇಶ ಸಂಚಾರ ಮಾಡುವವರು ಇದ್ದಾರೆ. ಹೀಗೆಯೇ ಸಕಲ ದೇಶಗಳಲ್ಲಿಯೂ ದೇವರನ್ನು ಪ್ರೀತಿ ಮಾ ಡುವ ಭಕ್ತರು ದೇವರ ಮಹಿಮೆಗಾಗಿ ಬದುಕುತ್ತಾರೆ. ಅಂಥಾ ಭಕ್ತರು ಹ್ಯಾಗಿರುವರೆಂಬದಾಗಿ ನಮ್ಮ ಗೀತೆಪುಸ್ತಕದ ಆರಂ ಭದಲ್ಲಿ ಬರದದೆ. ಅದು ಸಂಸ್ಕೃತದಲ್ಲಿ ನಿಮಗೆ ಹೇಳುತ್ತೇನೆ:

ಯೋ ಜನಃ ಪಾಪಿಲೋಕಾನಾಂ ಮಂತ್ರಣಾಂ ನಾನುಗಚ್ಛತಿ |
ಅಪರಾಧಿಮನುಷ್ಯಾಣಾಂ ಮಾರ್ಗೇ ಚ ನಹಿ ತಿಷ್ಠತಿ ||
ಏಕಾಸನೇ ನ ಚಾಸ್ತೆ ಯೋ ನಿಂದಕೈರ್ಮಾನುಷ್ಯೈಃ ಸಹ |
ಪರಂತು ಪರಮೇಶಸ್ಯ ಶಾಸ್ತ್ರೆ ಯಃ ಪರಿತುಷ್ಯತಿ ||
ತಥಾ ದಿವಾ ನಿಶಾಯಾಂಚ ಶಾಸ್ತ್ರಂ ಯತ್ ಪರಮೇಶಿತುಃ |
ತದಾಲೋಚಯತೇ ನಿತ್ಯಂ ಸ ಏವ ಧನ್ಯ ಉಚ್ಯತೆ ||

ಈ ಶ್ಲೋಕದ ಅರ್ಥವು ನಿಮಗೆ ಸುಲಭವಾಗಿ ತಿಳಿಯುವದೆಂದು ನೆನಸುತ್ತೇನೆ.

ಗಣ: ಹೌದು, ನಾನು ಗ್ರಹಿಸಿ ಕೊಂಡೆ. ಇದರ ಅರ್ಥವು ಹೇಳುತ್ತೇನೆ:

“ದುಷ್ಟರ ಆಲೋಚನೆಯಲ್ಲಿ ನಡೆಯದೆ, ಪಾಪಾತ್ಮರ ಮಾರ್ಗದಲ್ಲಿ ನಿಲ್ಲದೆ, ಕುಚೋದ್ಯಗಾರರು ಕೂತು ಕೊಳ್ಳುವಲ್ಲಿ ಕೂತು ಕೊಳ್ಳದೆ, ಯೆಹೋವನ ನ್ಯಾಯಪ್ರಮಾಣದಲ್ಲಿ ಸಂತೋಷಿಸಿ, ಅವನ ನ್ಯಾಯಪ್ರಮಾಣವನ್ನೇ ರಾತ್ರಿ ಹಗಲು ಧ್ಯಾನಿಸುವ ಮನುಷ್ಯನೇ ಭಾಗ್ಯವಂತನು.”

ಈ ಶ್ಲೋಕದಲ್ಲಿ ಬಹು ಜ್ಞಾನ ಉಂಟು; ಇದರಿಂದ ದೇವರ ನಿಜಭಕ್ತರು ಹ್ಯಾ ರುತ್ತಾರೆಂದು ತಿಳು ಕೊಂಡೆನು. ಆದರೆ ನೀವು ಕೊಟ್ಟ ಸುವಾರ್ತೆಪುಸ್ತಕವನ್ನು ಪೂರ್ಣವಾ

ಗಿ ಓದಿ ಇನ್ನು ಹೆಚ್ಚಾಗಿ ವಿಚಾರಿಸ ಬೇಕೆಂತ ಅಪೇಕ್ಷಿಸು ತ್ತೇನೆ.

ಪಾದ್ರಿ: ಒಳ್ಳೇದು, ಮತವನ್ನು ವಿಚಾರಿಸುವದು ಬುದ್ಧಿವಂತರ ಕೆಲಸವಾಗಿದೆ. ಆದರೆ ನೀವು ನಿಜ ದೇವರ ಮಾರ್ಗವನ್ನು ಕುರಿತು ವಿಚಾರಿಸುವಾಗ, ನಿತ್ಯವಾಗಿ ಆತನಿಗೆ ಪ್ರಾರ್ಥನೆ ಮಾಡಿರಿ. ಈ ಉಪಾಯದಿಂದ ನೀವು ದೇವರ ಆತ್ಮದ ಪ್ರಕಾಶವನ್ನು ಹೊಂದಿ, ಆತನ ಸತ್ಯ ಮಾರ್ಗವಾದ ಯೇಸು ಕ್ರಿಸ್ತನನ್ನು ಬೇಗ ತಿಳು ಕೊಳ್ಳುವಿರಿ.

ಈ ಪ್ರಕಾರ ಪಾದ್ರಿಸಾಹೇಬರ ಸಂಗಡ ಸಂಭಾಷಣೆ ಆದ ಮೇಲೆ, ಅವರೆಲ್ಲರು ಸಲಾಮ್ ಮಾಡಿ, ತಮ್ಮ ತಮ್ಮ ಮನೆಗೆ ಹೋದರು.



# ON PILGRIMAGES.

## A DIALOGUE.

# ತಿರುಪತಿಯಾತ್ರೆ.



MANGALORE:
PRINTED BY STOLZ & REUTHER, BASEL MISSION PRESS.
1870.

